# ಸಪ್ತಗಿರಿ

ಡಿಸೆಂಬರ್. 1987

ಬೆಲೆ : ರೂ ೧












ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ



ಶರಣು ವೆಂಕಟನಾಥ ಪೊರೆ ನಿಜಕರುಣಿ ಖಗವರೂಥ ॥ ಪ ॥

ನತಜನ ಕೃತ ಶರಣಾ ದಿತಿಸುತ ಮಥನನೆ ತವಚರಣ
ಸತತ ಎನಗಾಭರಣಾ ಎಂದೆಂಬೆನೊ ಗತರೋಗ ಜರಾಮರಣ -1-

ಸನಕಾದಿ ಮುನಿವಂದ್ಯ ಮಾನ್ಯ ನಿನ್ನವರಣುಗನೆನಿಸೊ ಎನ್ನ
ಅನುಪಮ ಗುಣಕನ್ನಾ ಒಲಿಯ್ಯೊ ಕಾಂಚನಗಿರಿವಾಸ ಎನ್ನ

ಎನ್ನ ದೋಷಗಳೆಲ್ಲ ನೋಡದಿರು ಪ್ರಸನ್ನ ಜನವತ್ಸಲ
ಅನ್ಯಗ ನಾನಲ್ಲ ಶ್ರೀಗುರು ಜಗನ್ನಾಥ ವಿಠಲ

—ಶ್ರೀ ಗುರುಜಗನ್ನಾಥದಾಸರು

# ತಿ. ತಿ. ದೇವಸ್ಥಾನಗಳು, ತಿರುಪತಿ.
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### ಕನ್ನಡ :

ಶ್ರೀನಿವಾಸನ ಹಾಡುಗಳು–ಭಾಗ–2 (ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರ.) 4–50

ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ)
–ವಿ. ಬಾದರಾಯಣ ಮೂರ್ತಿ 12–50

ಪುರಂದರೋಪನಿಷತ್ (ಪುರಂದರದಾಸರ ಏಳುಕೃತಿ ವಿವರಣೆ)
–ಬನ್ನಂಜೆ ಗೋವಿಂದಾಚಾರ್ಯ 7–00

ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ 3–75

ಕರ್ನಾಟಕ ಹರಿದಾಸರು(ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ 2–25

ಗೀತಾಸಾರೋದ್ಧಾರ
–ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು 4–00

ಸ್ತೋತ್ರ ಕುಸುಮಮಾಲಾ –ಸಂ. ವೆಂಕಟಾಚಲ 3–00

ಶ್ರೀ ವೆಂಕಟೇಶ್ವರ ಸುಪ್ರಭಾತ, ತ್ರಿವರ್ಣಚಿತ್ರ ವಿವರಣೆ 10–00

ಆಚಾರಗಳು ಆಡಂಬರಗಳು —ಕೆ. ಚಂದ್ರಮೌಳಿ 0–40

ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) 0–50

" " (ಕನ್ನಡ ಲಿಪಿಯಲ್ಲಿ) 0–12

#### ಮಕ್ಕಳಿಗಾಗಿ :

ಶ್ರೀಪಾದರಾಜರು –ಎಂ. ಎಸ್. ಗುಂಡೂರಾವ್ 0–75

ಮಹಿಪತಿದಾಸರು –ಶಾನಭಾಗ 0–85

ಪ್ರಸನ್ನ ವೆಂಕಟದಾಸರು –ವಿ. ಬಾದರಾಯಣಮೂರ್ತಿ 0–80

ಗೋಪಾಲದಾಸರು –ರುಕ್ಮಿಣಿಗಿರಿಮಾಜಿ 0–75

### ಹಿಂದಿ :

ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ
–ಡಾ॥ ಎಂ. ಸಂಗಮೇಶಂ 0–20

ಶ್ರೀ ವೆಂಕಟೇಶ್ವರ ಸುಪ್ರಭಾತ್ (ಸಚಿತ್ರ) 11–00

ತೀರ್ಥರಾಜ ತಿರುಪತಿ ಡಾ॥ ಎಂ. ಸಂಗಮೇಶಂ 1–50

### ಸಂಸ್ಕೃತ :

ಶ್ರೀ ವೇಂಕಟೇಶ್ವರ ಸುಪ್ರಭಾತಂ 0–12

ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ 0–62

ಕಠೋಪನಿಷತ್ –ಡಾ॥ ಕೆ ಸಿ. ವರದಾಚಾರಿ ಹಾಗೂ
ಡಾ॥ ಡಿ. ತಾತಾಚಾರ್ಯ 15–00

ಮಾರ್ಕಂಡೇಯ ಸಂಹಿತಾ 18–00

ತತ್ತ್ವಸಂಖ್ಯಾನಂ –ಆರ್. ರಾಮಮೂರ್ತಿ ಶರ್ಮಾ 2–00

ಬ್ರಹ್ಮಸೂತ್ರ ಭಾಷ್ಯ (ಭಾಗ–1)
–ಆರ್. ರಾಮಮೂರ್ತಿ ಶರ್ಮಾ 30–00

ಅಲಂಕಾರ ಸಂಗ್ರಹ ಸಂ–ಕೆ. ಭಾಸ್ಕರರಾವ್ 16–00

ಸೀತಾರಾಮಾಂಜನೇಯಂ
–ಡಾ॥ ಡಿ. ಅರ್ಕಸೋಮಯಾಜಿ 50–00

ಪ್ರಶ್ನೋಪನಿಷತ್ 11–00

ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ
–ಸಂ ಡಾ॥ ಎಸ್.ಬಿ. ರಘುನಾಥಾಚಾರ್ಯ 25–00

1000 ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ 30% ರಿಯಾಯಿತಿಯೂ, 500 ರೂಗಳಿಂದ 1000 ರೂ॥ 25% ರಿಯಾಯಿತಿಯೂ 100 ರೂ ಗಳಿಂದ 500 ರೂ ವರೆಗೆ 15% ರಿಯಾಯಿತಿಯೂ ಉಂಟು. ಅಂಚೆವೆಚ್ಚ ಪ್ರತ್ಯೇಕ.

ಕೂಡಲೇ ಬರೆಯಿರಿ:

ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,
ತಿ. ತಿ. ದೇ. ತಿರುಪತಿ.






ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲ ತಿರುಪತಿ ದೇವಸ್ಥಾನಗಳು,
ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**





ಸಂಪುಟ ೧೮]  ಡಿಸೆಂಬರ್ ೧೯೮೭  [ಸಂಚಿಕೆ ೭


# ವಿಷಯಸೂಚಿ



ಮುಖಚಿತ್ರ: ಶ್ರೀರಂಗನಾಥನ ಸೇವೆಯಲ್ಲಿ ಮೂವರು ಆಳ್ವಾರರು–ತೊಂಡರಡಿಪ್ಪೊಡಿ–ತಿರುಪ್ಪಾಣಿ–ಗೋದಾದೇವಿ. ಚಿತ್ರ: ಕೆ. ಜಗದೀಶ್.

ಹಿಂಬದಿಯಲ್ಲಿ: ಪುಷ್ಪಯಾಗದಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ

ಒಳಗಡೆ: ಪುತ್ತೂರು, ರಾಜಪಾಳೆಂ, ಪೀಲೇರು, ಮದನಪಲ್ಲಿಗಳಲ್ಲಿ ತಿ.ತಿ.ದೇ. ಕಲ್ಯಾಣಮಂಟಪಗಳ ನಿರ್ಮಾಣಕ್ಕೆ ಶಂಕುಸ್ಥಾಪನೆ.

# ಸಂಪಾದಕೀಯ

ಮನುಷ್ಯ ಮನುಷ್ಯನಿಗೂ ಒಂದೊಂದು ಕಥೆ, ಮನಸು ಮನಸಿಗೂ ಒಂದೊಂದು ವ್ಯಥೆ. ಈ ಕಥೆಗಳೂ ವ್ಯಥೆಗಳೂ ಪರಮ ಲೌಕಿಕವಾದಾಗ ಮರೆತುಬಿಡುತ್ತೇವೆ. ಮಹಾಪುರುಷರ ಜೀವನಗಳಿಗೆ ಸಂಬಂಧಿಸಿದಾಗ ಸ್ಥಾನ ಅವಸ್ಥಾಭೇದಗಳಿಂದ ಅವು ವಿಶಿಷ್ಟತೆಯನ್ನು ಹೊಂದುತ್ತವೆ. ಸಾಮಾಜಿಕವಾಗಿ ತಿರಸ್ಕಾರಕವಾದ ಸನ್ನಿವೇಶಗಳೂ ಸಹ 'ನಿಮಜ್ಜತಿಂದೋಃ ಕಿರಣೇಷ್ವಿವಾಂಕಃ' ಎಂಬಂತೆ ಹೊರಬಿದ್ದು ಹಳತಾಗದೆ, ಹಣೆಯ ತಿಲಕದಂತೆ ಹೊಳೆಯುತ್ತ ವಿನೂತನ ಸಂದೇಶ ಸಂಕೇತಗಳೇ ಆಗುತ್ತವೆ.

ಆಳ್ವಾರರಲ್ಲಿ ಒಬ್ಬರಾದ ವಿಪ್ರನಾರಾಯಣರು–ತೊಂಡರಡಿಪ್ಪೊಡಿ ಆಳ್ವಾರರು–ಅಸ್ಖಲಿತ ಬ್ರಹ್ಮಚಾರಿಯಾಗಿ ಶ್ರೀರಂಗನಾಥನ ಮಾಲಾಕೈಂಕರ್ಯದಲ್ಲಿ ಜೀವಿತ ತುರೀಯವನ್ನು ಸಾಧಿಸ ಬಯಸಿದ ವ್ಯಕ್ತಿ. ಅಂತಹವರಿಗೆ ವಿಧಿವಶದಿಂದ ದೇವದೇವಿಯೆಂಬ ವೇಶ್ಯಾಸಂಸರ್ಗವುಂಟಾಯಿತು. ಸದ್ಭಕ್ತಿ, ದೈವ ಪಾರವಶ್ಯಗಳು ಕರಗಿ ಇಹ ಪರವಶತೆಯುಂಟಾಗಿ, ದೇವದೇವೀ ಸಾಂಗತ್ಯದಿಂದ 'ನಿಲ್ಲಲಾರದೀ ದೇಹ ರಂಗನಾಥ' ಎಂದು ಪ್ರಾರ್ಥಿಸುವವರೆಗೆ ಮುಂದುವರೆಯಿತು. ಮುಂದಿನ ಕಥೆ ಎಲ್ಲರಿಗೂ ತಿಳಿದದ್ದೇ. ಕೊನೆಗೆ ತೊಂಡರಡಿಪ್ಪೊಡಿ ರಂಗನಾಥನಲ್ಲಿ ಲೀನವಾದರು ಎಂದು ಕಥೆ ಹೇಳುತ್ತದೆ. ಎಂತಹ ಮಹಾತ್ಮರಿಗಾದರೂ ಯಾವುದೋ ಒಂದು ಸಂದರ್ಭದಲ್ಲಿ ಕಾಲು ಎಡವುವುದು ತಪ್ಪದೆಂದೂ, ಒಮ್ಮೆ ಎಡವಿದ ಮಾತ್ರಕ್ಕೆ ಅದನ್ನು ಪತನವೆಂದು ಭಾವಿಸಬಾರದೆಂದೂ, ಪಶಾತ್ತಪ್ತನಾದ ಪ್ರತಿ ಜೀವಿಗೂ ಪರಮಾತ್ಮ ಸಾಕ್ಷಾತ್ಕಾರಾವಕಾಶ, ಅರ್ಹತೆಗಳು ಇವೆಯೆಂಬುದೂ ಇಲ್ಲಿನ ಸಂದೇಶ.

ಆಳ್ವಾರರಲ್ಲಿ ತಿರುಪ್ಪಾಣಾಳ್ವಾರ್ ಒಬ್ಬರು. ಸಾಮಾಜಿಕವಾಗಿ ಅಂತ್ಯಜರು, ಶ್ರೀ ರಂಗನಾಥನ ಕೀರ್ತನೆಗಳನ್ನು ಹಾಡಿ ಜೀವನವನ್ನು ಚರಿತಾರ್ಥ ಮಾಡಿಕೊಂಡ ಧನ್ಯಾತ್ಮ. ಆತನ ಭಕ್ತಿಗೆ ಮೆಚ್ಚಿದ ರಂಗನಾಥನಿಗೆ ಆತನ ಕುಲ ಹೀನವೆಂದು ತೋಚಲಿಲ್ಲ. ಆಲಯದಾಚೆಯಿರುವ ಆತನನ್ನು ಸನ್ನಿಧಿಗೆ ಕರೆದು ತಾರೆಂದು ಆಜ್ಞಾಪಿಸಿದರೆ, ಪಾರಮಾರ್ಥಿಕ ಪ್ರಯೋಜನ ಸಾಧಿಸುವಲ್ಲಿ ಸಾಮಾಜಿಕ ಲೌಲ್ಯಗಳನ್ನು ಮೀರಬೇಕೆಂದು, ಆಗಲೇ ಆತ್ಮೋನ್ನತಿಯೆಂದು ಸತ್ಯವನ್ನು ತಿಳಿದ ಲೋಕಸಾರಂಗಮುನಿ, ಪಾಣರನ್ನು ತಮ್ಮ ಹೆಗಲಲಿ ಹೊತ್ತು ರಂಗನಾಥನ ಸನ್ನಿಧಿ ಸೇರಿಸಿದರು. 'ಸಾಮಾಜಿಕಾಚಾರದ ಮಡಿ–ದಡಿ ಕಟ್ಟಿಕೊಂಡು ನಮ್ಮ ಸಮಜೀವನ ಚದುರಂಗದಲ್ಲಿ ದಲಿತ ಜನೋದ್ಧರಣವನ್ನೊಂದು ಕಾಯಿ ಮಾಡಿಕೊಂಡ ಇಂದಿನ ನಮಗಿಂತಲೂ ಆಚಾರದಲ್ಲಿ ಅಂದಿನವರು ಎಷ್ಟು ಮುಂದಿದ್ದರು ಎನ್ನಿಸುತ್ತದೆ.

ಹೆಣ್ಣು ಗಂಡೆಂಬ ಭೇದ ಐಹಿಕ ಪ್ರಯೋಜನಗಳಿಗೆ ಮಾತ್ರವೇ ಎಂದೂ, 'ನಡುವೆ ಸುಳಿವಾತ್ಮ ಹೆಣ್ಣೂ ಅಲ್ಲ ಗಂಡೂ ಅಲ್ಲ' ಎಂದೂ, ಆತ್ಮೋನ್ನತಿಗೆ, ಪರಮಾತ್ಮ ಸಾಕ್ಷಾತ್ಕಾರಕ್ಕೆ ಈ ಹೆಣ್ಣು ಗಂಡುತನಗಳು ಅಡ್ಡಿಯಾಗವೆಂದೂ, ಬ್ರಹ್ಮಜ್ಞಾನಿಗಳೆಷ್ಟೋ ಮಂದಿ ನಿರೂಪಿಸಿದ್ದಾರೆ. ಮುಗ್ಧ ಭಕ್ತಿಯೇ ಸಾಧನವಾಗಿ, ಗೋಪಿಕೆಯರೇ ಆದರ್ಶವಾಗಿ, ಅನನ್ಯ ಭಕ್ತಿಯಿಂದ ಆತನನ್ನು ಹೊಂದಬಹುದೆಂಬ ಸತ್ಯವನ್ನು ಸಾರಿದ ಸಂತ ವನಿತಾರತ್ನಗಳೂ ಇಲ್ಲುಂಟು. ಒಬ್ಬ ಅಕ್ಕಮಹಾದೇವಿ, ಒಬ್ಬ ಮೀರಾ, ಒಬ್ಬ ಆಂಡಾಳ್ – ಎಲ್ಲ ಹಿರಿಯರೇ ಭಕ್ತಿ ಸಾಮ್ರಾಜ್ಯದಲ್ಲಿ. ಪರಮಾತ್ಮನನ್ನು ಕುರಿತು ಹಾಡಲು, ಅವನನ್ನು ಆರಾಧಿಸಲು ಸಂಪ್ರದಾಯಗತವಾದ ಪಾಂಡಿತ್ಯ ಪ್ರೌಢಿಮೆಗಳು ಅಗತ್ಯವಿಲ್ಲವೆಂದು ಇಂದಿನವರಿಗೆ ಸಾರಿ ಹೇಳುವಂತೆ, ಗೋದಾದೇವಿ ನಾಚ್ಚಿಯಾರ್ ತಿರುಮೊಳಿ, ತಿರುಪ್ಪಾವೈಗಳನ್ನು ಹಾಡಿ ಹೋಗಿದ್ದಾಳೆ. ಹೆಣ್ಣು ಮೆಚ್ಚಿದ ಮನೆಯು ದೈವಕ್ಕೆ ಗುಡಿಯು ಎಂದು ಮಾತು ಮಾತಿಗೆ ಕಥೆ ಹೇಳುವ ನಮಗೂ ಆತ್ಮತತ್ತ್ವವನ್ನೂ, ಪರಮಾತ್ಮ ಪ್ರೀತಿಯನ್ನೂ ತೋರಿದ ಅವರಿಗೂ ಎಷ್ಟು ವ್ಯತ್ಯಾಸ.

ಹೀಗೆ ತೊಂಡರಡಿಪ್ಪೊಡಿ, ತಿರುಪ್ಪಾಣಿ, ಆಂಡಾಳ್–ಅವರುಗಳನ್ನು ನೆನಪಿಗೆ ತರುವ ಮಾಸವಿದು. ಅವರನ್ನು ನೆನೆದು ಆ ಹಿರಿಯರ ನೆನಪಿನಲ್ಲಿ ನಮ್ಮ ಬಾಳನ್ನು ಹಸನಾಗಿಸಿಕೊಳ್ಳುವ ಪ್ರಯತ್ನ ಪಡುವ.

ಓಂ – ಶಾಂತಿ – ಶಾಂತಿ – ಶಾಂತಿಃ

# ಪ್ರಾರ್ಥನೆಯ ರಹಸ್ಯ

ಶ್ರೀ ವಿ. ಬಾಲಚಂದ್ರ ಇನಾಂದಾರ್

ಪ್ರಾರ್ಥನೆ ಪ್ರತಿಯೊಂದು ವ್ಯಕ್ತಿಯ ಜೀವನದ ಒಂದು ಸಹಜ, ಸ್ವಾಭಾವಿಕ ಮತ್ತು ಅವಶ್ಯಕವಾದ ಅಂಗ. 'ಪ್ರಾರ್ಥನಾ'–ಎಂದರೆ ಬೇಡುವುದು ಯಾಚಿಸುವುದು ಎಂದು ಅರ್ಥ. ಮನುಷ್ಯ ಎಷ್ಟೇ ಮೇಧಾವಿಯಾಗಿದ್ದರೂ, ವ್ಯವಹಾರ ಚತುರನಾಗಿದ್ದರೂ ಮತ್ತು ದೂರದೃಷ್ಟಿಯವನಾಗಿದ್ದರೂ ಒಂದೊಂದು ಸಲ ಪ್ರಪಂಚದ ವ್ಯವಹಾರಗಳಲ್ಲಿ ಮಾನಸಿಕವಾಗಿ ತನ್ನನ್ನು ಅಲ್ಪಜ್ಞನೂ ಅಸಮರ್ಥನೂ ಎಂದು ಪರಿಗಣಿಸಿಕೊಂಡು, ಆಗ ತನಗಿಂತ ಶ್ರೇಷ್ಠವೆನಿಸುವ ವಸ್ತು, ವ್ಯಕ್ತಿ ಮತ್ತು ಪರಿಸರದ ಮೊರೆಹೋಗುವುದು ಅನಿವಾರ್ಯವಾಗುತ್ತದೆ. ಆಗ ಅವನು ದೀನನಾಗುತ್ತಾನೆ, ಸಹಾಯ ಯಾಚಿಸುತ್ತಾನೆ. ಸಾಮಾನ್ಯವಾಗಿ ಇದೇ 'ಪ್ರಾರ್ಥನೆ' ಎನಿಸಿಕೊಳ್ಳುತ್ತದೆ. ಈ ಪ್ರಾರ್ಥನೆಗೆ ಯಾವುದೇ ನಿಶ್ಚಿತವಿಲ್ಲ. ಅದು ವ್ಯಕ್ತಿಯಿಂದ ವ್ಯಕ್ತಿಗೆ ಬದಲಿಸುತ್ತದೆ. ಪ್ರತಿಯೊಂದು ವ್ಯಕ್ತಿಯ ಪ್ರಾರ್ಥನೆಯೂ ಒಂದೊಂದು ತರಹ. ಪ್ರಾರ್ಥನೆ ಮನುಷ್ಯನ ಮನಸ್ಸು ಮತ್ತು ಹೃದಯ ವೈಶಾಲ್ಯತೆಯ ಮೇಲೆ ರೂಪಗೊಳ್ಳುತ್ತದೆ. ಕೆಲವರಲ್ಲಿ ಇದು ಉಚ್ಚಾರದ ಮೂಲಕ ರೂಪಗೊಂಡರೆ, ಇನ್ನು ಕೆಲವರಲ್ಲಿ ಮನಸ್ಸಿನಲ್ಲಿ ಅಲೆಗಳಂತೆ ತೇಲಿ ತೇಲಿ ಬರುತ್ತದೆ. ಪ್ರಾರ್ಥನೆ ಪ್ರತಿಯೊಂದು ಧರ್ಮದ ಜೀವಾಳ. ಪ್ರಾರ್ಥನೆಯನ್ನು ತಿರಸ್ಕರಿಸುವ ಯಾವ ಧರ್ಮವೂ ಇಲ್ಲವೆನ್ನಬೇಕು.

ಇಂದಿನ ಈ ಆಧುನಿಕ ಯುಗದಲ್ಲಿ ಒಂದು ವಿಶೇಷ ಪ್ರಾರ್ಥನೆ ರೂಪಗೊಂಡಿದೆ ಅದೇ– "ಧನ್ಯವಾದ". ಈ ಪ್ರಾರ್ಥನೆಯಂತೆ ಪ್ರಾರ್ಥಿಸುವವರಲ್ಲಿ ತಮ್ಮ ಯಾವುದೇ ವ್ಯಕ್ತಿಗತ ಕಷ್ಟ ನಿವಾರಣೆಯ ಯಾಚನೆಯಿಲ್ಲ. ಯಾವುದೇ ಐಹಿಕ ಫಲದಾಶೆಯಿಲ್ಲ. ಅವರು ಭಗವಂತನ ಮುಂದೆ ಕೃತಕ ದೀನರಾಗುವದಿಲ್ಲ. ಆದರೆ, ದೇವರು ದಯಪಾಲಿಸಿದ ದಿವ್ಯ ಮಾನವ ಜನ್ಮಕ್ಕಾಗಿ ತಮ್ಮನ್ನು ತಾವು ಧನ್ಯರೆಂದು ತಿಳಿದುಕೊಳ್ಳುತ್ತಾರೆ. ಅದಕ್ಕಾಗಿ ಪರಮಾತ್ಮನಿಗೆ ತಮ್ಮ 'ಧನ್ಯವಾದ'ಗಳನ್ನು ತಿಳಿಸುತ್ತಾರೆ–ಇದೂ ಕೂಡ ಯೋಗ್ಯವಾದ ಪ್ರಾರ್ಥನೆಯೇ! ಹೀಗೆ ಪ್ರಾರ್ಥನೆ ಅನಾದಿ ಕಾಲದಿಂದ ಇಂದಿನವರೆಗೂ ತನ್ನ ಸತ್ತ್ವವನ್ನು ಕಾಯ್ದುಕೊಂಡು ಬಂದಿರ ಬೇಕಾದರೆ ಅದರ ರಹಸ್ಯವೇನೆಂಬುದನ್ನು ತಿಳಿಯುವುದವಶ್ಯಕವಾದುದು.

ಪರರಾಷ್ಟ್ರಗಳಲ್ಲಿ ಜನಾನುರಾಗ ಗಳಿಸುತ್ತಿರುವ ಈ 'ಪ್ರಾರ್ಥನೆ' ಸನಾತನ ಧರ್ಮದ ನೆಲೆಬೀಡಾದ ಭಾರತದಲ್ಲಿಯೇ ಇಂದು ತಿರಸ್ಕಾರಗೊಳ್ಳುತ್ತಿದೆ. ಜನರಲ್ಲಿ ಇದರ ಬಗ್ಗೆ ತಪ್ಪು ಕಲ್ಪನೆಗಳು ಬೆಳೆಯುತ್ತಿವೆ. ಇದನ್ನೊಂದು ಅರ್ಥಹೀನವಾದ ಕಾರ್ಯ ಸಮಯನಷ್ಟ, ವಿಡಂಬನೆ ಮತ್ತು ಸಾಮರ್ಥ್ಯಹೀನತೆಯ ದ್ಯೋತಕವೆಂದು ತಿಳಿಯಲಾಗುತ್ತಿದೆ. ಆದರೆ ಈ ಕಲ್ಪನೆ ಸರಿಯಲ್ಲ. ಯಾರಲ್ಲಿಯಾದರೂ ಪ್ರಾರ್ಥನೆ–ಎಂದರೆ, ಪರಮೇಶ್ವರನನ್ನು ಪ್ರೀತಿ ಮಾತುಗಳಿಂದ, ಸ್ತೋತ್ರಪಾಠಗಳಿಂದ ಲೋಭಿಸಿ ತಮ್ಮ ಕಾರ್ಯ ಸಾಧಿಸಿಕೊಳ್ಳುವ ಮಾರ್ಗವೆಂಬ ಭಾವನೆಯಿದ್ದರೆ ಅದು ಶುದ್ಧ ಸುಳ್ಳು. ಆ ದೇವರು ಎಂದೂ ಇಂತಹ ಮೋಸಗಾರರ ಬಲೆಗೆ ಬೀಳಲಾರ. ಹಾಗೆ ಮಾಡಬಯಸಿದಲ್ಲಿ ಅದು ಪ್ರತಿಯಾಗಿ ವಿಪರೀತ ಫಲವನ್ನೇ ಕೊಡುವುದು. ಈ ಪ್ರಾರ್ಥನೆಯ ಇನ್ನೊಂದು ಮಹತ್ವದ ಲಕ್ಷಣವೆಂದರೆ– ಇದು ಮನುಷ್ಯನ ಯಾವುದೇ ದೈಹಿಕ ಅವಸ್ಥೆಗೆ ಸಂಬಂಧಿಸಿದುದಲ್ಲ. ಪ್ರಾರ್ಥನೆ ಮಾಡುವ ವ್ಯಕ್ತಿ ಪುರುಷನಾಗಿರಬಹುದು ಸ್ತ್ರೀಯಾಗಿರಬಹುದು. ಅಂಗಹೀನನಾಗಿರಬಹುದು ಅಥವಾ ಯಾವುದೇ ವರ್ಣದವನಿರಬಹುದು, ಎಲ್ಲರೂ ಪ್ರಾರ್ಥನೆಗೆ ಅರ್ಹರೇ! ಜೊತೆಗೆ ಇದು ಮನಸ್ಸು ಮತ್ತು ಆತ್ಮ ವಿಕಾಸದ ಪ್ರಯತ್ನವಾದುದರಿಂದ ಅರ್ಹತೆಯ ಪ್ರಶ್ನೆಯೇ ಬರುವದಿಲ್ಲ. ಶರೀರಕ್ಕೆ ಹಸಿವು ನೀರಡಿಕೆ ಎಷ್ಟು ಸಹಜವೋ ಆತ್ಮಕ್ಕೆ ಪ್ರಾರ್ಥನೆ ಅಷ್ಟೆ ಸಹಜ ಮತ್ತು ಅನಿವಾರ್ಯ.

ಪ್ರಾರ್ಥನೆಯಲ್ಲಿ – ಭಗವಂತನ ಮಂಗಳಮಯ ವಿಧಾನದಲ್ಲಿ ಆತ್ಮ ಸಮರ್ಪಣೆ ಮಾಡುವುದು ಪ್ರಥಮ ದರ್ಜೆಯ ಪ್ರಾರ್ಥನೆ. ಲೋಕ ಹಿತಕ್ಕಾಗಿ ಮಾಡುವ ಪ್ರಾರ್ಥನೆ ದ್ವಿತಿಯ ದರ್ಜೆಯದು ಮತ್ತು ಕೇವಲ ಸ್ವಾರ್ಥ ಮತ್ತು ಕಾರ್ಯ ಸಾಧನೆಗಾಗಿ ಮಾಡುವ ಪ್ರಾರ್ಥನೆ ತೃತೀಯದರ್ಜೆಯದು. ಆದ್ದರಿಂದ ನಿಜವಾದ ಪ್ರಾರ್ಥನೆ ಎಂದರೆ ಶ್ರದ್ಧೆ ಶರಣಾಗತಿ ಮತ್ತು ಆತ್ಮ-ಸಮರ್ಪಣೆ. ಮಹಾಪ್ರಭು ಚೈತನ್ಯ, ಸಂತ ತುಕಾರಾಮ, ಸ್ವಾಮಿರಾಮದಾಸ, ಭಕ್ತ ಮೀರಾಬಾಯಿ, ತುಲಸೀದಾಸ, ಸೂರದಾಸ ಮುಂತಾದವರ ಪ್ರಾರ್ಥನೆಗಳು ಜಗತ್ಪ್ರಸಿದ್ಧವಾಗಿವೆ. ಅವರ ಪ್ರಾರ್ಥನೆ ಕೇವಲ ನಿಷ್ಕಾಮ ನಿಸ್ವಾರ್ಥ ಮತ್ತು ಲೋಕಹಿತಕ್ಕಾಗಿಯೇ! ಅವರ ಪ್ರಾರ್ಥನೆಯ ಒಟ್ಟು ಸಾರ–ಸರ್ವೇ ಭವಂತು ಸುಖಿನಃ, ಸರ್ವೇ ಸಂತು ನಿರಾಮಯಾಃ, ಸರ್ವೇ ಭದ್ರಾಣಿ ಪಶ್ಯಂತು ಮಾಕಶ್ಚಿತ್ ದುಃಖಭಾಗ್ಭವೇತ್ ॥ (ಎಲ್ಲರೂ ಸುಖವಾಗಿರೋಣ, ಎಲ್ಲರೂ ಆನಂದ ಹೊಂದೋಣ, ದುಃಖಕ್ಕೆ ಯಾರೂ ಗುರಿಯಾಗದಿರಲಿ) –ಎಂತಹ ಉದಾತ್ತವಾದ ಪ್ರಾರ್ಥನೆ! ಪ್ರಾರ್ಥನಾ ರಹಿತವಾದ ಮನುಷ್ಯಜನ್ಮ ಪಶುಪಕ್ಷಿಗೆ ಸಮಾನವಾದುದೆಂದು ಓರ್ವ ಆಂಗ್ಲಕವಿ ಕೂಡ ಹೇಳಿದ್ದಾನೆ. ಇದು ಮನುಷ್ಯ ಮತ್ತು ದೇವರ ನಡುವಿನ ವಾರ್ತಾಲಾಪದ ಮಾಧ್ಯಮ. ಯಾವ ಮಹಾಶಕ್ತಿಯಿಂದ ಈ ಅನಂತ ಬ್ರಹ್ಮಾಂಡವು ಉತ್ಪನ್ನವಾಗಿದ್ದು, ಪೋಷಿಸಲ್ಪಡುತ್ತದೆಯೋ ಆ ಶಕ್ತಿಯ ಜೊತೆಗೆ ಸಂಪರ್ಕ ಹೊಂದಲು ಸರಳವಾದ ಮತ್ತು ಸರಿಯಾದ ಮಾರ್ಗ ಈ ಆಂತರಿಕ ಪ್ರಾರ್ಥನೆ.ಪ್ರಾರ್ಥನೆ ಕೇವಲ ದೇವ ಮಂದಿರದಲ್ಲಿ ಮಾತ್ರ ಸೀಮಿತವಾಗಿರಬಹುದು ಎಂದೇನೂ ಇಲ್ಲ. ಯಾವುದೇ ಸಮಯದಲ್ಲಿ, ಎಲ್ಲಿಯಾದರೂ ಸಲ್ಲಿಸಲ್ಪಡಬಹುದು–'ಅಕಾಲೋ ನಾಸ್ತಿ ಧರ್ಮಸ್ಯ' ಎಂಬಂತೆ. ಪ್ರಾರ್ಥನೆ ಎಷ್ಟೆಷ್ಟು ಸರಳ ಮತ್ತು ಆಂತರಿಕವಾಗುತ್ತದೆಯೋ ಅಷ್ಟು ಭಗವಂತನಿಗೆ ಸಮೀಪವಾಗುತ್ತ ಹೋಗುತ್ತದೆ. ಇದು ಮನುಷ್ಯನ ಚಂಚಲವಾದ, ಜೀವನ ಅನೇಕ ಗೊಂದಲಗಳಲ್ಲಿ ಹರಿದು ಹಂಚಿ ಹೋಗಿರುವ ಮನಸ್ಸನ್ನು ಏಕಾಗ್ರಗೊಳಿಸುವ ಮಾನಸಿಕ ವ್ಯಾಯಾಮವಾಗಿದೆ. ಯಾವಾಗ ಮನಸ್ಸು ಏಕಾಗ್ರವಾಗುತ್ತದೋ ಆವಾಗ ಅದಕ್ಕೆ ಆತ್ಮನ ಲಕ್ಷಣಗಳಾದ – ಸತ್ ಚಿತ್ ಆನಂದಗಳು ತಾವೇ ತಾವಾಗಿ ದೊರೆಯುತ್ತವೆ. ಈ ಆನಂದ ಸುಖ ಸಂತೋಷಗಳನ್ನು ದೊರಕಿಸಿಕೊಳ್ಳಲೆಂದೇ ನಮ್ಮ ಜೀವನದ ಸಮಸ್ತ ಚಟುವಟಿಕೆಗಳು. ಮನಸ್ಸಿಗೆ ಹಾಯೆನಿಸಿದಾಗ ಶಾರೀರಿಕ ಕಷ್ಟಗಳು ಅರ್ಥಹೀನವಾಗುತ್ತವೆ. ಹೀಗೆ ಪ್ರಾರ್ಥನೆ ಮನಸ್ಸಿನ ಜೊತೆಗೆ ನೇರ ಮತ್ತು ವ್ಯವಸ್ಥಿತವಾದ ಸಂಬಂಧ ಹೊಂದಿದೆಯೆಂದು ಇದರಿಂದ ತಿಳಿಯುವುದು. ಹಾಗಾದರೆ ಪ್ರಾರ್ಥನೆಯಿಂದ ಉಂಟಾಗುವ ಅದ್ಭುತ ಈಶ್ವರೀಯ ಆತ್ಮಶಕ್ತಿಯ ರಹಸ್ಯವೇನೆಂದು ಈಗ ವಿವರವಾಗಿ ತಿಳಿಯೋಣ.

ಮನೋವಿಜ್ಞಾನಿಗಳ ಅಭಿಪ್ರಾಯದಂತೆ 'ಪ್ರಾರ್ಥನೆ' ಎನ್ನುವುದು ಅವ್ಯಕ್ತ ಮನಸ್ಸಿನ ಒಂದು ಚೇತನ. ನಮ್ಮ ದಿನ ನಿತ್ಯದ ವ್ಯವಹಾರದಲ್ಲಿ ತೊಡಗಿರುವ ಮನಸ್ಸಿಗಿಂತ ಅತೀತವಾದ

ಅವ್ಯಕ್ತವಾದ ಮತ್ತು ಆಂತರಿಕವಾದ ಸೂಕ್ಷ್ಮ ಮನಸ್ಸೊಂದಿದೆ. ಹೊರಗಿನ ಮನಸ್ಸು ಜಡ ಚಂಚಲ ಮತ್ತು ಅನುಭವಗಮ್ಯವಾದದ್ದು. ಆದರೆ ಈ ಒಳ ಮನಸ್ಸು ಚೇತನ ಮತ್ತು ಅಜಡವಾಗಿದ್ದು ಹೊರ ಮನಸ್ಸಿಗೆ ಪ್ರೇರಕವಾಗಿದೆ. ಇದರ ಕೇಂದ್ರಾಧಾರದಲ್ಲೇ ಹೊರಮನಸ್ಸು ಚೇತನವನ್ನು ಹೊಂದಿ ಸಕಲ ವ್ಯವಹಾರಗಳಲ್ಲಿಯೂ ತೊಡಗಿಕೊಂಡು ಅತ್ಯಂತ ಚಂಚಲವಾಗಿ ತೋರುತ್ತದೆ. ಈ ಅವ್ಯಕ್ತ ಮನಸ್ಸಿನಿಂದ ಪ್ರೇರಿತವಾದದ್ದು ಈ–ಪ್ರಾರ್ಥನೆ. ಬುದ್ಧಿ, ಸದ್‌ಭಾವ ಮತ್ತು ವಿವೇಕಗಳು ಇದರ ಪ್ರೇರಕ ಗುಣಗಳು. ನಮಗೆ ಅನುಭವದಲ್ಲಿರುವಂತೆ ನಾವು ಮಲಗಿ ನಿದ್ರಿಸುವಾಗ ನಮ್ಮ ಇಂದ್ರಿಯಗಳೂ ವಿಶ್ರಾಂತಿ ಪಡೆಯುತ್ತವೆ. ಅವುಗಳ ವಿಶ್ರಾಂತಿಯೇ 'ನಿದ್ರೆ' ಯಾಗಿದೆ. ಮನಸ್ಸು ಕೂಡ ಒಂದು ಇಂದ್ರಿಯ–"ಮನಃ ಷಷ್ಠಾನಿ – ಇಂದ್ರಿಯಾಣಿ". ಆದುದರಿಂದ ಅದೂ ವಿಶ್ರಾಂತಿ ಪಡೆಯುತ್ತದೆ. ಆದರೆ ಈ ಒಳ ಮನಸ್ಸಿಗೆ ವಿಶ್ರಾಂತಿಯೇ ಇಲ್ಲ, ದಿನ–ರಾತ್ರಿ ಕಾರ್ಯ ತತ್ಪರವಾಗಿದ್ದು ಸುಖ, ಶಾಂತಿ ಸಮಾಧಾನ ಮತ್ತು ಆನಂದ ಪ್ರದಾಯಕವಾಗಿದೆ. ಈ ಒಳ ಮನಸ್ಸಿನ ಭಾವವೇ–ಪ್ರಾರ್ಥನೆ. ಇದರಿಂದ ಪ್ರಾರ್ಥನೆಯ ಮನೋವೈಜ್ಞಾನಿಕ ಆಧಾರ ಒಳ ಅಥವಾ 'ಗುಪ್ತ ಮನಸ್ಸು' ಎಂದು ತಿಳಿಯುತ್ತದೆ. ಈ ವಿಜ್ಞಾನದಂತೆ ಪ್ರಾರ್ಥನೆ, ಒಂದು ಆತ್ಮ ಸಂಕೇತ ಅಥವಾ ಆತ್ಮ ಸೂಚನಾ ಆಗಿದೆ. ಯಾವ ಪ್ರಕಾರವಾಗಿ ಒಂದು ಕಠಿಣ ಪ್ರಸಂಗದಿಂದ ಖಿನ್ನ ಮನಸ್ಕರಾಗಿ ಕುಳಿತ ನಮಗೆ ಓರ್ವ ಹಿತೈಷಿ ಮಿತ್ರನ ಉತ್ಸಾಹ ವರ್ಧಕ ಮಾತುಗಳು ಬಲವನ್ನು ತುಂಬಿ ನಮ್ಮಲ್ಲಿರುವ ನಿರಾಶೆಯನ್ನು ಹೊಡೆದೋಡಿಸುತ್ತವೆಯೋ ಹಾಗೆಯೇ ಶುದ್ಧ ಮನಸ್ಸಿನಿಂದ ಮಾಡಿದ ಪ್ರಾರ್ಥನೆ ನಮ್ಮ ಧೀಃ ಶಕ್ತಿ ಹಾಗೂ ಆತ್ಮ ಬಲವನ್ನು ವರ್ಧಿಸಿ ನಮ್ಮನ್ನು ವಿವೇಕಿಗಳನ್ನಾಗಿಸುತ್ತದೆ. ಈ ಪ್ರಾರ್ಥನೆ ಅಂತಃಕರಣ (ಗುಪ್ತಮನಸ್ಸು)ದಲ್ಲಿ ಹುಟ್ಟಿ ಪುನಃ ಅದರಲ್ಲಿಯೇ ಸೇರಿ ನಮ್ಮ ಮನಸ್ಸಿನ ಸ್ತರದ ಬಿಂದು ಭಾಗವಾಗುತ್ತದೆ. ಅನಂತರ ಪ್ರಾರ್ಥನೆಯ ಸಮಯದಲ್ಲಿ ಮನಸ್ಸಿನ ಏಕಾಗ್ರತೆಯಿಂದಾಗಿ 'ಸೂಚನೆ' ಗಳ ಪ್ರವಾಹ ನೇರವಾಗಿ ಗುಪ್ತ ಮನಸ್ಸನ್ನು ಪ್ರವೇಶಿಸುತ್ತದೆ. ನಮ್ಮಲ್ಲಿರುವ ಪ್ರವೃತ್ತಿಗಳು ಅವುಗಳನ್ನು ಸ್ವೀಕಾರ ಮಾಡಿ ಅವುಗಳ ಆದೇಶದಂತೆ ಪ್ರವೃತ್ತವಾಗುತ್ತವೆ ಪ್ರಾರ್ಥನೆಸಮಯದಲ್ಲಿ ಶರೀರ ನಿರ್ಲಕ್ಷ್ಯವಾಗಿದ್ದು, ಎಷ್ಟೆಷ್ಟು ತನ್ಮಯತೆ ಉಂಟಾಗುವುದೊ ಅಷ್ಟಷ್ಟು ಆದರಕಾರ್ಯ ಸುಸ್ಪಷ್ಟ. ಕಣ್ಣುಗಳನ್ನು ಮುಚ್ಚಿ ಮನಸ್ಸನ್ನು ನಿಗ್ರಹಿಸಿ ವಿರೋಧ ಮತ್ತು ಅಡೆತಡೆಗಳನ್ನು ನಿವಾರಿಸಿ ಚಿತ್ತವನ್ನು ಏಕಾಗ್ರಗೊಳಿಸಿದಷ್ಟು ಬಾರಿ ನಮಗೆ ಪರಮಾತ್ಮನ ದಿವ್ಯ ಸ್ಪರ್ಶದ ಭಾವನೆಯಿಂದ ರೋಮ ರೋಮಗಳಲ್ಲಿಯೂ ಪವಿತ್ರತೆಯ ಸಂಚಾರವಾಗುತ್ತದೆ. ಇದೇ ಅಭಿಪ್ರಾಯವು ಗೀತೆಯ,

ಮಯ್ಯೇವ ಮನ ಆಧತ್ಸ್ವ
ಮಯಿ ಬುದ್ಧಿಂ ನಿವೇಶಯ ।
ನಿವಸಿಷ್ಯಸಿ ಮಯ್ಯೇವ
ಅತ ಊರ್ಧ್ವಂ ನ ಸಂಶಯಃ ॥

–ಎಂಬ ಶ್ಲೋಕದಲ್ಲಿ ವ್ಯಕ್ತವಾಗಿದೆ.

ಶಬ್ದಗಳನ್ನು, ವಾಕ್ಯಗಳನ್ನು ಗಿಳಿಯಂತೆ ಪಾಠ ಹೇಳುವುದಾಗಲೀ ಅವುಗಳನ್ನೇ ಪುನರಾವರ್ತಿಸುವುದಾಗಲೀ ಮಾತ್ರ ಪ್ರಾರ್ಥನೆಯಾಗಲಾರದು. ಇತರಂತೆ ಯಾವುದಾದರೂ ಭಜನ, ಸ್ತೋತ್ರ ಅಥವಾ ವಿಶಿಷ್ಟವಾದ ಮಂತ್ರಗಳನ್ನು ವಿಶೇಷರೀತಿಯಿಂದ ಹೇಳುವುದೇ ಪ್ರಾರ್ಥನೆ–ಎಂದು ಕೆಲವರ ಅಭಿಪ್ರಾಯವಾದರೆ, ಲಕ್ಷ್ಮೀ, (ದುಡ್ಡು), ಅಧಿಕಾರ, ಯಶ, ಸಂತಾನ ಪ್ರಾಪ್ತಿ ಮತ್ತು ಕೌಟುಂಬಿಕ ಸಮಸ್ಯೆಗಳನ್ನು ಬಯಕೆಗಳನ್ನು ದೇವರ ಎದುರಿಗೆ ನಮ್ರತೆಯಿಂದ ಕೇಳಿಕೊಳ್ಳುವದೇ ಪ್ರಾರ್ಥನೆ–ಎಂದು ಬಹುತೇಕ ನಮ್ಮೆಲ್ಲರ ಅಭಿಪ್ರಾಯ. ಆದರೆ ಇದು ನಿಜವಾದ ಪ್ರಾರ್ಥನೆಯ ಲಕ್ಷಣವಲ್ಲ. ಇದರಿಂದ ಕಾರ್ಯ ಸಾಧಿಸಿತೆಂದು ಹೇಳಲು ಬರುವುದಿಲ್ಲ. ನಿಜವಾದ ಅರ್ಥದಲ್ಲಿ–ಸಮಸ್ತ ವಿಶ್ವದ ಸೃಷ್ಟಿ ಸ್ಥಿತಿ ಲಯಕಾರಣ ಕರ್ತಾ ಸರ್ವೋದ್ಧಾರಕ, ಪರಮಪಿತಾ, 'ಸತ್ಯಂ ಶಿವಂ ಸುಂದರಂ'–ಸ್ವರೂಪ ಮತ್ತು ಸರ್ವವ್ಯಾಪಿಯಾದ ಪರಮಾತ್ಮನೊಂದಿಗೆ ಏಕರಸವಾಗುವ ಮಾನವೀಯ ಪ್ರಯತ್ನವೇ 'ಪ್ರಾರ್ಥನೆ'. ಆದ್ದರಿಂದ ಈ ಪ್ರಾರ್ಥನೆಯ ಅಂತಿಮಧ್ಯೇಯ ಆತ್ಮ–ಪರಮಾತ್ಮ ಐಕ್ಯವೇ ಆಗಿದೆ. ಅಂತೆಯೇ ಪ್ರಾರ್ಥನೆಯಲ್ಲಿ ನಾವು ಪರಮೇಶ್ವರನನ್ನು ಕುರಿತು – ಹೇ! ಪರಮೇಶ್ವರ! ನೀನು ಸಚ್ಚಿದಾನಂದನಾಗಿದ್ದೀ! ಬುದ್ಧಿಯ ಸಾಗರನಾಗಿರುವಿ, ಶಕ್ತಿಯ ಭಂಡಾರನಾಗಿರುವಿ, ನಿನ್ನ ಚೇತನಾಂಶವೇ ಆಗಿರುವ ನಮ್ಮಲ್ಲಿ ನಿರ್ಮಲ ಬುದ್ಧಿಯನ್ನು ಕೊಡು – "ತೇಜೋಸಿ ತೇಜೋ ಮಯಿದೇಹಿ"–ತೇಜವೇ ಆಗಿರುವ ನೀನು ನನಗೆ ತೇಜಸ್ಸನ್ನು ಕೊಡು, ಶಕ್ತಿಯನ್ನು ಕೊಡು, ಸದ್ಗುಣಗಳನ್ನು ಕೊಡು, ದಯಾಮಯನೇ, ಈ ಅಲ್ಪವಾದ ಜೀವನವನ್ನು ಸಾರ್ಥಕಗೊಳಿಸು. ನಿನ್ನಲ್ಲಿ ನಿಶ್ಚಲವಾದ ಸ್ಥಾನಕೊಡು–ಎಂದೇ ಪ್ರಾರ್ಥಿಸಬೇಕು.

ಮೇಲಿನ ಮನೋವೈಜ್ಞಾನಿಕ ದೃಷ್ಟಿಕೋನದಿಂದ ಪ್ರಾರ್ಥನೆ ಎನ್ನುವುದು ಶುದ್ಧಭಾವನಾಯುಕ್ತವಾದ ಪರಾ – ಮನಸ್ಸಿನ ಒಂದು ಕ್ರಿಯೆ ಎಂಬುದು ಸ್ಪಷ್ಟವಾಗುವದು ಆಂಗ್ಲ ಕವಿ ಟೆನಿಸನ್ ಹೇಳುವಂತೆ ಜಗತ್ತಿನಲ್ಲಿ ಮಹಾನ್ ಕಾರ್ಯಗಳು ಪ್ರಾರ್ಥನೆಯಿಂದಲೇ ನೆರವೇರಿಸಲ್ಪಡುತ್ತವೆ– *'More things wrought by prayer than this worlJ dreems of'*.

ಮಹಾತ್ಮ ಗಾಂಧೀಜಿಯವರು ತಮ್ಮ ಜೀವನದಲ್ಲಿ ಏನನ್ನು ಸಾಧಿಸಿದರೋ ಅದೆಲ್ಲ ಅವರ ಪ್ರಾರ್ಥನೆಯ ಶಕ್ತಿಯಿಂದ ಎಂದು ಹೇಳಬಹುದು. ಅವರಿಗೆ ಪ್ರಾರ್ಥನೆಯಲ್ಲಿ ಅಚಲವಾದ ನಂಬಿಕೆಯಿತ್ತು: ಅದರಂತೆ ಭಾರತೀಯ ಸಂಸ್ಕೃತಿಯ ಮಹಾನ್ ಲಕ್ಷಣಗಳಲ್ಲಿ ಪ್ರಾರ್ಥನೆಯೂ ಒಂದು ಎಂದು ಅವರಿಗೆ ಮನವರಿಕೆಯಾಗಿತ್ತು. ಅಂತೆಯೇ ಅವರು ಸ್ವತಃ–"ನನಗೆ ಎದುರಾಗುವ ರಾಷ್ಟ್ರೀಯ ಸಾಮಾಜಿಕ ಅಥವಾ ನೈತಿಕ ಕಠಿಣ ಸಮಸ್ಯೆಗಳನ್ನು ಎದುರಿಸುವಾಗ ನಾನು ನನ್ನ ಬುದ್ಧಿಯ ಸಹಾಯಕ್ಕಿಂತಲೂ ಪ್ರಾರ್ಥನೆಯಿಂದ ಉಂಟಾಗುವ ಪರಿಶುದ್ಧ ಅಂತಃಕರಣದ ಸಹಾಯವನ್ನೇ ಪಡೆಯುತ್ತಿದ್ದೆ"–ಎಂದಿದ್ದಾರೆ.

ಹೀಗೆ ಪ್ರಾರ್ಥನೆಯಿಂದ ಮನುಷ್ಯನಲ್ಲಿ ಬುದ್ಧಿಯ ನಿರ್ಮಲತೆ ನೈತಿಕ ಬಲ, ಅಂತಃಕರಣದ ಪಾವಿತ್ರ್ಯ, ಆತ್ಮ–ಶಕ್ತಿ, ಆತ್ಮ-ಶ್ರದ್ಧೆ ಮತ್ತು ಮನುಷ್ಯ ಜನ್ಮದ ಕೃತಾರ್ಥತೆಯೊಂದಿಗೆ – ಇಹದಲ್ಲಿಯೇ ಅಮಿತ ಆನಂದ ದೊರೆಯುತ್ತದೆ. ಜೊತೆಗೇನೆ ಮನುಷ್ಯನ ಸಮಸ್ತ–ಪ್ರಾಪಂಚಿಕ ಮನಸ್ತಾಪ ಮತ್ತು ಕ್ಲೇಶಗಳ ದೂರವಾಗಿ ನಮಗೆ ನವ–ಜೀವನ, ನವ – ಶಕ್ತಿ ಮತ್ತು ಸುಖದ ಪ್ರಾದುರ್ಭಾವಗಳಾಗುವುವು ಇದೇ 'ಪ್ರಾರ್ಥನೆ'ಯ ಮನೋವೈಜ್ಞಾನಿಕ ರಹಸ್ಯ.

(ಆಧಾರ–ಕಲ್ಯಾಣ)

## ವೃಕ್ಷೋ ರಕ್ಷತಿ ರಕ್ಷಿತಃ

ಮರಗಳನ್ನು ಕಾಪಾಡಿರಿ; ಅವು ನಿಮ್ಮನ್ನು ಕಾಪಾಡುತ್ತವೆ.

ಮರೆಯದಿರಿ ;

ಮನುಷ್ಯ ಕರ್ತವ್ಯಗಳಲ್ಲಿ ತರುಗಿಡ ಸಂರಕ್ಷಣೆ, ಪೋಷಣೆಗಳೂ ಉಂಟು.

# ಇತಿಹಾಸ ಪುಟಗಳಲ್ಲಿ ಮಾಧ್ವಮಠ

**ಶ್ರೀ ಆದ್ಯರಾಮಾಚಾರ್ಯ**

ಇತಿಹಾಸದ ಪುಟಗಳನ್ನು ತಿರುವಿ ಹಾಕಿದಾಗ ಅನೇಕ ಮಹತ್ವದ ಘಟನೆಗಳು ಕಾಣಸಿಗುತ್ತದೆ. ಕನ್ನಡನಾಡು ದಾರ್ಶನಿಕರಿಗೆಲ್ಲ ತವರು ಭೂಮಿ ಹಾಗೂ ಆಶ್ರಯವನ್ನಿತ್ತ ನೆಲ. ಈ ನೆಲದಲ್ಲಿ ಜನ್ಮತಾಳಿದವರು ಮಧ್ವಾಚಾರ್ಯರು. ಅವರಿಂದ ಪ್ರಣೀತವಾದ ತತ್ವವನ್ನು ದ್ವೈತ-ತತ್ತ್ವ ಎಂದು ಕರೆಯುವುದುಂಟು. ಇವರು ಪದ್ಮನಾಭತೀರ್ಥರು, ನರಹರಿ ತೀರ್ಥರು, ಮಾಧವ ತೀರ್ಥರು ಅಕ್ಷೋಭ್ಯತೀರ್ಥರೆಂಬ ಯತಿಗಳಿಗೆ ಆಶ್ರಮವನ್ನಿತ್ತು, ಪ್ರಚಾರಕರೆಂದು ನಿಯಮಿಸಿದರು. ಈ ನಾಲ್ವರೂ ಉತ್ತರ ಕರ್ನಾಟಕದವರೆಂದೇ ಕರೆಸಿಕೊಂಡಿದ್ದಾರೆ. ದ್ವೈತಿಗಳಲ್ಲಿ ಇವರನ್ನೆಲ್ಲ ಘಟ್ಟದ ಮೇಲಿನ ಯತಿಗಳು ಎಂದು ಗುರುತಿಸುವುದುಂಟು. ಶ್ರೀ ಜಯತೀರ್ಥಯತಿಗಳಿಂದ ರಚಿತವಾದ ಸುಧಾ (ನ್ಯಾಯಸುಧಾ)ಎಂಬ ಗ್ರಂಥವಂತೂ ತತ್ತ್ವಜ್ಞಾನಚಿಂತಕರಿಗೆ ರಸದೌತಣವನ್ನೀಯುವ ಮೇರುಕೃತಿ ಎಂದೆನಿಸಿಕೊಂಡಿದೆ. ಈ ಮಹನೀಯರ ಕಾಲವನ್ನು 1391 ರಿಂದ 1368 ಎಂದು ಗುರುತಿಸಲಾಗುವುದು, ಇನ್ನು ಇವರ ನಂತರ ಬಂದ ವಿದ್ಯಾಧೀಶರ ಕಾಲವು 1617 ರಿಂದ 1639 ಎಂದು ಹೇಳಲಾಗಿದೆ. ಇವರು ಗೋದಾವರಿ ತೀರದ ಪ್ರಣತಾಂಬಾ ಎಂಬ ಅಗ್ರಹಾರ ನಿವಾಸಿಗಳೆಂದು ತಿಳಿದು ಬರುತ್ತದೆ.

ಶ್ರೀಮದುತ್ತರಾದಿ ಮಠದ ಯತಿಗಳ ಪರಂಪರೆಯನ್ನು ಸೂಚಿಸುವಂತಹ ಹಿಂದು ಗ್ರಂಥವಿದ್ದು ಅದನ್ನು ಸತ್ಕಥಾ ಎಂದು ಕರೆಯಲಾಗಿದೆ. ಈ ಗ್ರಂಥದಲ್ಲಿ ಸತ್ಯವಿಜಯತೀರ್ಥರವಿಚಾರವೂ ಕಾಣಸಿಗುತ್ತದೆ. ಇವರು 1735 ರ ನಂತರ ಪಟ್ಟಕ್ಕೆ ಬಂದವರು. ಮುಂದೆ ಸತ್ಯ ಪರಾಕ್ರಮರು 1874 ರಲ್ಲಿದ್ದವರು. ಇವರು ಸಾತಾರೆಯ ಹತ್ತಿರದಲ್ಲಿರುವ ಕೃಷ್ಣಾತೀರದ ವಾಯಿ ಎಂಬ ಸ್ಥಳದವರು. ಈ ಗ್ರಂಥವು ಸುಮಾರು 75 ವರುಷಗಳ ಹಿಂದೆ ಮುದ್ರಿತವಾಗಿ ಸರ್ವರ ಕೈಗೆ ದೊರೆಯುವಂತಾಗಿದೆ. ಶ್ರೀ ಮಠದಲ್ಲಿ ಲಭ್ಯವಾದ ಕಾಗದ ಪತ್ರಗಳ ಆಧಾರದಿಂದ ಈ ಗ್ರಂಥವು ರಚಿತವಾಗಿರಬಹುದು ಎಂದೆನಿಸುತ್ತದೆ. ಇದರಲ್ಲಿ ಸತ್ಯವರರ ಚರಿತ್ರೆಯೂ ಇದೆ. ಇವರ ಕಾಲವು 1798 ರಿಂದ 1833. ಈ ಮಹಾನುಭಾವರನ್ನು ಪುಣೆಯ ಶ್ರೀಮಂತ ಪೇಶ್ವೆ ಎಂದೆನಿಸಿಕೊಳ್ಳುತ್ತಿದ್ದ, ಎರಡನೆಯ ಬಾಜೀರಾಯನು ತಾನಾಗಿ ಬಂದು ಭೇಟಿಯಾದ ಉಲ್ಲೇಖವು ಕಾಣಸಿಗುತ್ತದೆ.

ಶ್ರೀಮಠವು ಸಂಚಾರಕ್ರಮೇಣ ಉತ್ತರಭಾರತದ ಕಡೆಗೆ ಪ್ರಯಾಣ ಹೊರಟಿತು. ಪಂಢರಪುರ ಕ್ಷೇತ್ರದಲ್ಲಿ ಅನೇಕ ಗ್ರಹಸ್ಥರು ಬಂದು ಶ್ರೀಮಠದ ಶಿಷ್ಯತ್ವವನ್ನು ಸ್ವೀಕರಿಸಿದರು. ನಂತರ ಶ್ರೀಮಠವು ಪೇಶ್ವೆಯವರ ರಾಜಧಾನಿಯೆನಿಸಿದ ಪೂನಾ ನಗರಕ್ಕೆ ಆಗಮಿಸಿತು. ಆ ಸಮಯದಲ್ಲಿ ಎರಡನೆ ಬಾಜೀರಾವ್ ಪೇಶ್ವೆ ಪದವನ್ನಲಂಕರಿಸಿದ್ದ. ಶ್ರೀಗಳವರ ಕೀರ್ತಿಯು ಆತನ ಕಿವಿಯವರೆಗೆತಲುಪಿತ್ತು. ಆದುದರಿಂದ ಈ ಪೂಜ್ಯರನ್ನು ಅತ್ಯಂತ ಸನ್ಮಾನಪೂರ್ವಕ ಸ್ವಾಗತಿಸಿ ಅವರನ್ನು ಕರೆತರಲು ಸರದಾರ್ ಘೋರ್ಪಡೆಯವರನ್ನು ನಿಯುಕ್ತಿಗೊಳಿಸಿದ. ಶ್ರೀಗಳವರು ತಮ್ಮ ಶಿಷ್ಯಪರಿವಾರ ಸಮೇತರಾಗಿ ಹಿಂದು ತಿಂಗಳವರೆಗೆ ಪೂನಾ ನಗರದಲ್ಲಿ ಬಿಡಾರ ಮಾಡಿಕೊಂಡಿದ್ದರು. ಆ ಸಮಯದಲ್ಲಿ ಶ್ರೀಮಂತ ಬಾಜಿರಾವ್ ಪೇಶ್ವೆ ಹಾಗೂ ಆತನ ಇನ್ನುಳಿದ ಸರದಾರರು ಮನಃಪೂರ್ವಕವಾಗಿ ಶ್ರೀಮಠದ ಸೇವೆಯನ್ನುಮಾಡಿದರು. ಶ್ರೀಮಠಕ್ಕೆ ಅನೇಕ ದಾನಧರ್ಮಾದಿಗಳನ್ನೀಯಲಾಯಿತು. ಅಂದು ಪೇಶ್ವೆಯವರಿಂದ ದಾನವಾಗಿ ದೊರೆತ ನಗನಾಣ್ಯಗಳ ವಿವರವು ಈ ರೀತಿಯಾಗಿರುವುದು–

ಹಿಂದು ಲಕ್ಷ ಲಕ್ಷ್ಮೀ ವರಾಹಗಳು. ಅಲ್ಲದೆ ಬೇರೆ ಬಂಗಾರದ ನಾಣ್ಯಗಳು. ಮಕರಕಂಠೀಹಾರ 1. ಮುತ್ತಿನಹಾರ 1. ಎರಡು ಮಣಬಂಗಾರದ ಮಂಟಪ, ಅಂಬಾರಿಗಳಿಂದ ಕೂಡಿದ ನಾಲ್ಕು ಆನೆಗಳು ಹಾಗೂ ಜಾತಿವಂತ ಇಪ್ಪತ್ತೈದು ಕುದುರೆಗಳು – ಇವುಗಳನ್ನು ಶ್ರೀಮಠಕ್ಕೆ ಕೊಟ್ಟರೆ ಮಠದೊಂದಿಗಿದ್ದ ಪಂಡಿತರಿಗೂ ಸಹ ಅವರವರ ಯೋಗ್ಯತಾನುಸಾರವಾಗಿ ಸನ್ಮಾನವನ್ನು ಮಾಡಲಾಯಿತು. ಅಷ್ಟೇ ಅಲ್ಲದೆ ಸತ್ಯಧರ್ಮ ಸ್ವಾಮಿಗಳ ಪೂರ್ವಾಶ್ರಮದ ಮಕ್ಕಳಿಗೆ ಬಂಗಾರದ ಕಡಗ ಹಾಗೂ ಮುತ್ತಿನ ಕರ್ಣಕುಂಡಲಗಳು ಮತ್ತು ಶಿರಪೇಚ ಮೊದಲಾದ ಅಲಂಕಾರಗಳನ್ನೀಯಲಾಯಿತು.

ಸತ್ಯಧರ್ಮತೀರ್ಥರು ಪುಣೆಯಿಂದ ಪಂಚವಟಿಗೆ ಆಗಮಿಸಿದರು. ಅಲ್ಲಿರುವ ಶ್ರೀರಾಮ ಮಂದಿರದಲ್ಲಿ ಬಿಡಾರಮಾಡಿದರು, ಆಗ ಹಿಂದುದಿನ ಸ್ವಪ್ನದಲ್ಲಿ – ನೀವು ಇನ್ನು ದಕ್ಷಿಣಕ್ಕೆ ಹೊರಡಿರಿ– ಎಂದು ಪ್ರಭು ರಾಮಚಂದ್ರನು ಅಪ್ಪಣೆ ಮಾಡಿದ. ಆಗ ಶ್ರೀಗಳವರು ತ್ರ್ಯಂಬಕೇಶ್ವರಕ್ಕೆ ಬಂದು ಮಹದೇವನ ದರ್ಶನ ಮಾಡಿಕೊಂಡು ಕೊಲ್ಹಾಪುರಕ್ಕೆ ದಿಗ್ವಿಜಯಮಾಡಿದರು. ಕೊಲ್ಹಾಪುರದ ಮಹಾರಾಜರು ಶ್ರೀಮಠವನ್ನು ಬಹು ವೈಭವದಿಂದ ಸ್ವಾಗತಿಸಿದರು. ಶ್ರೀಮಠದ ಸೇವೆಗೈದ, ಮಹಾಪ್ರಭುಗಳು ಈ ಕೆಳಗಿನಂತೆ ಶ್ರೀಮಠಕ್ಕೆ ನಗ ನಾಣ್ಯಗಳನ್ನು ದಾನಮಾಡಿದರು (1) ಹತ್ತುಸಾವಿರ ಲಕ್ಷ್ಮೀವರಾಹ ಬಂಗಾರದ ನಾಣ್ಯಗಳು. (2) ನಾಲ್ಕು ಕಲಶಗಳಿಂದ ಕೂಡಿದ ಬಂಗಾರದ ಪಲ್ಲಕ್ಕಿ. (3) ಅನೇಕ ಬಗೆಯ ರತ್ನಾಲಂಕಾರಗಳು. (4) ಬೆಳ್ಳಿ ಬಂಗಾರದ ಆಭರಣಗಳಿಂದ ಅಲಂಕೃತವಾದ ಎರಡು ಆನೆಗಳು, (5) ಹತ್ತು ಜಾತಿವಂತ ಕುದುರೆಗಳು. ಅಲ್ಲದೆ ಬಂಗಾರದ ಅನೇಕ ತಟ್ಟೆ ಪಾತ್ರೆ

ಮೊದಲಾದವುಗಳನ್ನು ಧಾರಾಪೂರ್ವಕ ದಾನ ಮಾಡಲಾಗಿದೆ.

ಶ್ರೀಮಠವು ದಕ್ಷಿಣದಲ್ಲಿ ಪ್ರವಾಸವನ್ನು ರಂಭಿಸುವುದರಿಂದ ಅವರ ಆಗಮನವಾರ್ತೆಯನ್ನು ಕರವೀರಪುರದವರು ಮೊದಲೇ ಮೈಸೂರಿನ ಪ್ರಭುಗಳಿಗೆ ತಮ್ಮ ದೂತರ ಮುಖಾಂತರ ತಲುಪುವಂತೆ ಏರ್ಪಾಟು ಮಾಡಿದ್ದರು. ಪ್ರಯಾಣ ಕಾಲದಲ್ಲಿ ಶ್ರೀಮಠಕ್ಕೆ ಯಾವುದೇ ರೀತಿಯಲ್ಲಿ ತೊಂದರೆಗಳಾಗದಂತೆ ನೋಡಿಕೊಳ್ಳಬೇಕೆಂದು ಕರವೀರಪುರದ ಪ್ರಭುಗಳು ಮಾರ್ಗದಲ್ಲಿರುವ ತಮ್ಮ ಸರದಾರರಿಗೆಲ್ಲ ಮೊದಲೇ ತಿಳಿಸುವ ಏರ್ಪಾಟನ್ನು ಮಾಡಿದ್ದರು.

ಶ್ರೀಮಠವು ಮೈಸೂರನ್ನು ತಲುಪಿತು. ಶ್ರೀಗಳವರು ಹದಿನೈದು ದಿನಗಳ ಕಾಲ ಮೈಸೂರಿನಲ್ಲಿಯೇ ಬಿಡಾರಮಾಡಿದ್ದರು. ಆಗ ದಿವಾನ್ ಪೂರ್ಣಯ್ಯನವರು ಶ್ರೀಪಾದಂಗಳವರಲ್ಲಿ ಪ್ರಾರ್ಥನೆ ಸಲ್ಲಿಸಿದರು.

"ಪೂಜ್ಯರಾದ ತಾವು ಇನ್ನು ಮೇಲೆ ಬಹುಕಾಲ ಮೈಸೂರು ರಾಜ್ಯದಲ್ಲಿದ್ದುಕೊಂಡು ಪ್ರಭುಗಳ ಕ್ಷೇಮ ಚಿಂತನೆ ಮಾಡುತ್ತ ಹೊಳೆನರಸೀಪುರ ಎಂಬ ಸ್ಥಳದಲ್ಲಿರಬೇಕು ಎಂದು ಪ್ರಭುಗಳ ಅಪೇಕ್ಷೆ ಇದೆ. ಈ ಮೊದಲೇ ವೇದವ್ಯಾಸತೀರ್ಥರಿಗಾಗಿ ನಿರ್ಮಿಸಿ ಕೊಡಲಾಗಿದ್ದ ಮಠದಲ್ಲಿ ತಮಗೆ ಅನುಕೂಲವಾಗುವಂತೆ ಏರ್ಪಾಡನ್ನು ಮಾಡಿ ಕೊಡಲಾಗುವುದು. ತಾವು ಅಲ್ಲಿಯೇ ಇದ್ದುಕೊಂಡು ಪಾಠ ಪ್ರವಚನ ಕಾರ್ಯದಲ್ಲಿ ನಿರತರಾಗಬೇಕು. ಆಗಾಗ ಸ್ವತಃ ನಾನೇ ಬಂದು ತಮ್ಮ ಯೋಗಕ್ಷೇಮವನ್ನು ವಿಚಾರಿಸಿಕೊಂಡುಬರುವೆ. ಈ ಮೊದಲಿನ ಮಠದ ಜೀರ್ಣೋದ್ಧಾರ ಕಾರ್ಯಕ್ಕಾಗಿ ಇಪ್ಪತ್ತು ಸಾವಿರ ಬಂಗಾರದ ಮೊಹರುಗಳನ್ನು ಕೊಡಲಾಗುವುದು. ಶ್ರೀಮಠದಲ್ಲಿ ನಗಾರಿ, ನೌಬತ್ತು ಮೊದಲಾದ ಸೇವೆಗಳ ತಪ್ಪದೆ ಸಾಗುವಂತಾಗುವ ವ್ಯವಸ್ಥೆ ಮಾಡಲಾಗಿದೆ. (ಕಾಲ 1810) ಇದಲ್ಲದೆ ಶ್ರೀಮಠಕ್ಕೆ ಅನೇಕ ವರ್ಷಾಸನಗಳೊಂದಿಗೆ ಧನಕನಕಾದಿಗಳನ್ನೂ ದಾನಮಾಡಲಾಗುವುದು".

ದಿವಾನ ಪೂರ್ಣಯ್ಯನವರು ತಮ್ಮ ದಿವಾನ ಪದವಿಯನ್ನು ತ್ಯಜಿಸಿ ಶ್ರೀರಂಗಪಟ್ಟಣದಲ್ಲಿ ವಾಸಮಾಡತೊಡಗಿದರು.

ಒಂದುದಿನ ಇದ್ದಕ್ಕಿದ್ದಂತೆ ಹೊಳೆನರಸೀಪುರದ ಮಠವು ಬೆಂಕಿಗಾಹುತಿಯಾಯಿತು. ಸುಮಾರು ಎಂಟುದಿನಗಳಕಾಲ ಅದು ಉರಿಯುತ್ತಲಿತ್ತು. ಬಹುಪರಿಶ್ರಮದಿಂದ ಶ್ರೀಗಳವರನ್ನು ಹಾಗೂ ಹಿರಿಯ ಉಗ್ರಾಣವನ್ನೂ ಹೊರ ತೆಗೆಯಲಾಯಿತು. ಆ ದಳ್ಳುರಿಗೆ ಸಿಕ್ಕು ಶ್ರೀಮಠದ ಅನೇಕ ಮೌಲಿಕ ಪದಾರ್ಥಗಳು ಭಸ್ಮವಾಗಿ ಹೋದವು. ಎಲ್ಲಕ್ಕೂ ಹೆಚ್ಚಿನ ಸಂಗತಿಯೆಂದರೆ ಶ್ರೀಮಠದ ಅನೇಕ ಮಹತ್ವಪೂರಿತ ಕಾಗದ ಪತ್ರಗಳೂ ನಾಶವಾದವು. ಬಹುದೊಡ್ಡ ಗ್ರಂಥ ಭಂಡಾರವನ್ನು ಕಳೆದುಕೊಳ್ಳಬೇಕಾಯಿತು.

ಆ ಕಾಲದಲ್ಲಿ ಮೈಸೂರಿನಲ್ಲಿ ಬಾಬುರಾವ್ ಎಂಬ ದಿವಾನರಿದ್ದರು. ಅವರು ಈ ದಾರುಣ ವಾರ್ತೆಯನ್ನು ಕೇಳಿದಾಕ್ಷಣ ಹೊಳೆನರಸಿಪುರಕ್ಕೆ ಧಾವಿಸಿ ಬಂದು ಶ್ರೀಗಳವರ ದರ್ಶನ ಪಡೆದರು. ಶ್ರೀಮಠದ ಪುನರುಜ್ಜೀವನಕ್ಕಾಗಿ ತಾವು ಎಲ್ಲ ರೀತಿಯಿಂದಲೂ ಸಹಾಯ ಮಾಡುವುದಾಗಿ ಭರವಸೆಯುನ್ನಿತ್ತರು. ಸಂಪೂರ್ಣ ಭಸ್ಮವಾಗಿ ಹೋಗಿದ್ದ ಕಟ್ಟಡದಲ್ಲಿ ಏನಾದರೂ ಉಳಿದಿದೆಯೋ ಹೇಗೆ ಎಂದು ಶೋಧನೆ ನಡೆಸಿದಾಗ ಈ ಕೆಳಗಿನ ಪದಾರ್ಥಗಳು ಮಾತ್ರ ದೊರೆತವು:

1. ನಾಲ್ಕುಸೇರಿನ ನವರತ್ನ ಹಾರ.
2. ಕೃಷ್ಣಾಜಿಪಂತರಿಂದ ಕೊಡಲ್ಪಟ್ಟ ಪಟ್ಟದ ರಾಮದೇವರು.
3. ವಿಜಯನಗರದ ಅರಸರಿಂದ ಕೊಡಲ್ಪಟ್ಟ ವಜ್ರದಹಾರ.

(36 ನೇ ಪುಟ ನೋಡಿ)

# ಶ್ರೀಗುರು ಚರಿತ್ರೆ

ಹರಿಹರಾದಿಗಳಂದೊಲಿಯುತಲಿ
ಸರಸಿಜಭವನೊಡನೆ ಸತಿಯನಂ
ದರಸುತಲಿ ಬಂದು ಶಿಶುಗಳನಿಸಿ ಮೆರೆದರಿಳೆಯೊಳಗೆ।
ಮುರಹರಾದಿಗಳು ಕರುಣಿವು ವೀ
ಪರಿಯನೋಡಾ ನಾಮಧಾರಕ
ನೆರೆಭಜಿಸರ ಪೊರೆವರು ಸಂಶಯ ಬೇಡವಿದರೊಳಗೆ॥

ನಾಮಧಾರಕ ಕೇಳು ಹರನೊಂ
ದಮ್ಮ್ಯ ಹರಿಯೊಂದಂಶ ಮೇಣಾ
ಬೊಮ್ಮನೊಂದಂಶ ಶಿಶುಗಳೆನಿಸಿರಲನಸುಯೆಗಾಗ।
ಅಮ್ಮನಾ ಚಂದಿರನ ಸೇರುವೆ
ನಮ್ಮ ಹರ ತಪಕೆ ಹೊರಡುವನೀ
ಕಾಮಜನಕನುಳಿವನು ದತ್ತಾತ್ರೇಯನೆನಿಸುತಲಿ॥

ಎಂದು ನಮಿಸುತ ತಾಯ ಚರಣಕೆ
ಬಂದು ನಿಂದರು ಅಜಹರಾದಿಗ
ಳಂದು ತನ್ಮೂಲವಿನಲಿ ನಿಯಮಿಸಿದ ನಿಯತಕೆನುತಲಿ।
ಸಂದು ಬಂದವು ದಿನಗಳವು ಹಲ
ವಿಂದಲಿರ್ದನು ದತ್ತಮೂರುತಿ
ಬಂಧಕಾರಣವಿಳೆಗೆ ತೋರುವ ಕಾಲಸಂದಿರಲು॥

ಬಾಲಕನು ನಾನು ಮತಿಹೀನನು
ಪಾಲಿಸುತೊಲವಿನಲಿ ಗುರುಚರಣ
ಕೊಲಿಸುವುದು ಕರುಣೆಯಲಿ ಕಾಯುವುದೆನ್ನ ತಾನೆನಲು।
ಬಾಲಕನೆ ಬಾಡದಿರು ತೋರು ವಿ
ಶಾಲಮತಿಯಪರಿಮಿತ ಭಕುತಿಯ
ಲಾಲಿಸುತ ದಿಕೆಯನೆನುತ ನುಡಿದರಾಮುನಿಗಳಂದು॥

ಸಗರಪುತ್ರರ ಮುಕುತಿಗೆಂದೇ
ಗಂಗೆ ಧರೆಗಿಳಿದಂತೆ ಬಲಿಯುಮ
ನೆಗೆಯೆ ವಾಮನ ಬಂದು ಕರುಣಿಸಿದಂತೆ ತೋರಿರಲು
ಗಂಗೆಯೊಡೆಯನನೊಂದುಗೂಡಿದ
ನಂಗಜನಕಾ ದತ್ತ ಮೂರುತಿ
ಯಂಗನೆಯೊಳುದಿಸುವ ನೆವವ ಮಾಡಿದ ಮನದಲಂದು॥

ಪೂರ್ವದೊಳು ಪೀಠಾಪುರವೆನಿಪ
ಪಾರ್ವರು ನೆಲೆಸಿದಗ್ರಹಾರದೊ
ಳೊರ್ವನಾಪಳರಾಜನೆಂಬೊಂ ಶಾಸ್ತ್ರ ಪರಿಣತನು।
ಪಾರ್ವನಾತನ ಭಾರ್ಯೆಸುಮತಾ
ಪಾರ್ವಳತಿಥಿಗಳತಿ ಭಕುತಿಯಿಂ
ಪಾರ್ವೆವಿನ್ನಾತೆರನ ಭಕುತಿಯನೆನೆ ಮೆರೆದಳಲ್ಲಿ॥

ಇರಲಿರಲು ಮುರವೈರಿ ಬಂದನು
ವರದದತ್ತಾತ್ರೇಯ ಬಂದನು
ಕರುಣ ಮೂರುತಿ ಗಾಣಗಾಪುರದರಸ ಬಂದನಲಾ।
ವರವ ನೀಡುತ ಸತಿಗೆ ಶ್ರೀ ಪಾ
ದಕೆನಿಸಿ ಮೆರೆಯಲೆಂದುರವಣಿಸಿ
ಹರಿಯು ಹರಿತಂದನವರಲ್ಲಿಗೆ ಭಿಕ್ಷೆಯಾ ನೆವದಿಂ॥

ಯತಿಯ ವೇಷವ ಕಂಡು ಚಣದೊಳ್
ಸತಿಯು ಭಿಕ್ಷೆಯ ತಂದವಳಿ ಗೀ
ಯುತನಮಿಸಿದಳು ಪದಕೆ ತುಂಬಿ ಬರುತಿಹ ಭಕುತಿಯೊಳು।
ಆ ತರುಣಿಯ ಭಕುತಿಗೊಲಿಯುತಂ
ತಾತನಖಿಳ ಜಗಕೊಡೆಯನಹುದೆ
ನುತ ವಿರಾಡ್ರೂಪವನು ತೋರಿದನಾಕ್ಷಣದೊಳಗೆಯೆ॥

ವಿಶ್ವರೂಪನ ಜಗದ ವಂದ್ಯನ
ಈಶ ಪರಮೇಶನ ದರುಶನವ
ನಾಶಿಸಿದೊಡೆಯು ದೊರಕದ ವಿಬುಧ ಮೂರುತಿಯ ಕಂಡಳ್।
ಲೇಶಭಕುತಿಗೊಲಿವ ಸಕಲ ಜಗ
ದೀಶನನು ಪಾವನ ಚರಿತನವ
ನೀಶನನು ಕಂಡು ಪದಕೆರಗಿದಳಾಗ,ಹರುಷದೊಳು॥

ಪದಕೆ ನಮಿಸಿದ ಸತಿಯ ಹರಸುತ
ಪದುಮನಾಭನು ಮುದದಿ ನುಡಿದನು
ಪದುಮಮುಖಿ ಮನದ ಬಯಕೆಯ ನೀನೀಗ ಬೇಡುವುದು।
ಪದುಮನಾಭನೆ ತಾನು ನೀ ಬೇ
ಡಿದುದನೀವೆನು ಸಾನುರಾಗದಿ
ಪದದಿ ನುಡಿವುದು ಮನದೊಳಡಗಿಹ ಇಷ್ಟಕಾಮಗಳ॥

ವರಗುರುವಿನ ನುಡಿಗೆ ಹರುಷದಿಂ
ಸರಸಿಜವದನೆ ಸುಮತಿ ಸುಮತಿಯು
ಕರವ ಮುಗಿದು ಪರಮ ಪರಬ್ರಹ್ಮ ಪರಮೇಶನನಾ।
ಪರಮಪುರುಷನ ಪದುಮನಾಭನ
ಪರವಶತೆಯಲಿ ಭಕ್ತಿಭಾವದಿ
ಪುರಹರನರಹರಿಯು ದತ್ತಾತ್ರೇಯನ ಭಜಿಸಿದಳ್॥

ಜಯತು ಜಯಬಾಲಕಗೊಲಿದವಗೆ
ಜಯತು ಜಯ ಯೋಗೀಶ್ವರಮುನಿಗೆ
ಜಯತು ಪ್ರಹ್ಲಾದಗೊಲಿದು ಹಿರಣ್ಯನ ವಧಿಸಿದಂಗೆ।

**ಶ್ರೀಮತಿ ಸತ್ಯವತಿ ಎಸ್. ನಾರಾಯಣ**

ಜಯುತು ಜಯ ದಶಾವತಾರಿಗೆ
ಜಯುತು ಅಜಹರ ರೂಪ ಪೊತ್ತಗೆ ।
ಜಯುತು ದತ್ತಾತ್ರೇಯ ಮೂರುತಿಗೆ ಕರುಣಾನಿಧಿಗೆ ॥

ಮಗನ ಕರುಣಿಸು ನಿನ್ನ ಹೋಲುವ
ಅಗಣಿತಗುಣವ ಪಡೆದ ಸುಜ್ಞಾ
ನಾಗರನನು ಕರುಣಿಸು ಮೂಜಗವವನ ಪೊಗಳುತಿರೆ ।
ಸುಗುಣವಂತನ ಶಾಸ್ತ್ರಕೋವಿದ
ನಾಗಮ ನಿಪುಣನಮಳ ಚರಿತನ
ಜಗದವಂದ್ಯನ ನೀಡೆನಗೆ ಭವವ ಪರಿಹರಿಸುತಲಿ ॥

ಪರಮ ಗುಣಮಣಿ ನಿನ್ನ ನೋಡುತ
ವರವ ಕೇಳುವ ಬಯಕೆ ಎನಗೀ
ಪರಿಯೊಳಾಯ್ತು ನಿನಗೆ ಸರಿಯೆನಿಪ ಪುತ್ರನ ಕರುಣಿಸು ।
ಪರಮ ರೂಪದಲೊಲಿದು ಭಕುತರ
ಪರಿಪರಿಯಲಿ ಕರುಣಿಪ ಕರುಣಾ
ವಾರಿಧಿ ಸಲಹೋ ಎನ್ನ ಮನದಿಚ್ಛೆಯನು ಸಲಿಸುತಲಿ ॥

ಅಂದು ಮೊಸಳೆಯ ಬಂಧಕೆ ಸಿಲುಕಿ
ಇಂದಿರೇಶ ಸಲಹೆನಲುರದಿಂ
ಬಂದು ಸಲಹಿದೆ ಮೋಕ್ಷವ ಕರುಣಿಸಿದೆ ಗಜೇಂದ್ರಂಗೆ ।
ಮಂದರುದ್ಧರ ಬಂದು ಸಲಹೈ
ಮಂದಮತಿಗಳನು ಹತಭಾಗ್ಯರ
ತಂದೆ ಗತಿ ಯಾರಿಲ್ಲ ಪುತ್ರರಿಗೆನುತಲೆರಗಿದಳು ॥

ರಾವಣಾದಿಗಳಂದು ನಂಬವೆ
ನೋವತಾಳ್ದರು ತಮ್ಮವರ ಕಳೆ
ದೋವಿ ಭಜಿಸಿದವನನುಜ ಗೆಲಿದನೊಲಿದ ಲಂಕೆಯನು ।
ದುರುಳ ದುರ್ಯೋಧನನು ಜಲದೊಳು
ದುರುಳನಂದದಿ ನಡೆದು ಮಡಿದನು
ಮುರುಳಿ ಮೋಹನ ನಿನ್ನ ಮನದಂತರವನರಿಯದಲೆ ॥

ಬೇಡದಿರ್ದರು ಕರುಣಿ ಬಾಲಕ
ಗುಡುಪದವಿಯಿತ್ತೆ ಪ್ರಹ್ಲಾದಗೆ
ನೀಡಿ ದರುಶನ ನಾರಸಿಂಹನೆನಿಸಿ ಒಲಿದವನು ನೀ ।
ಆಡದಲೆ ಕೊಡುವ ಘನಮಹಿಮಾ
ಆಡಿದೆನು ಮನದ ಬಯಕೆಯ ನೀ
ನೀಡು ಕರುಣಾಬ್ಧಿ ಯೆನುತಲೆರಗಿದಳು ಪರಮಪದಕೆ ॥

ಹದಿಬದೆಯೆ ನೀನು ಕಳವಳ ಮಾ
ಣೆಂದುಮುಖಿ ಮನದ ಬಯಕೆಯ ಬಿಡ
ದಿಂದು ಸಲಿಸುವೆ ನಾ ಮಗನೆನಿಸಿ ನಿನ್ನೊಳೀ ಭವದೊಳ್ ।

ಪಾದರೇಂಬಂಕಿತದೊಳಿಳೆಯೊಳ
ಗುದಿಸಿ ಸನ್ಯಾಸ ಧರುಮವ ತಾ
ನಿಳೆಯೊಳಗೆ ಪಸರಿಸಲು ಬೇಹುದು ಧರ್ಮ ಬೆಳಗಲ್ಕೆ ॥

ಇಚ್ಛೆಯೊಳು ಜಗದ ಜನನವುಮಂ
ಇಚ್ಛೆಯೊಳು ತಾ ಮರಣವನೊಮಂ
ಇಚ್ಛೆಯೊಳು ತನಗೆನಿಸಿದುದ ಮಾಳ್ಪ ಮುನಿಗಳವರಲಾ ।
ಇಚ್ಛೆಯನು ಸತಿ ತಾನುಸಿರಲಾ
ಗಚ್ಚರಿಯ ತೋರ್ಪಂದದಿ ಹರಸಿ
ಸಚ್ಚರಿತ ದತ್ತಗುರು ಚಣದೊಳ್ ಮಾಯವಾದರಲ್ಲಿ ॥

ಸತಿಯನರಸುತ ಬಂದು ಬೆರಗಿನ
ಸತಿಯ ಕಾಣುತ ಹದನನರುಹೆನೆ
ಸತಿಯು ತಾ ಕಂಡಚ್ಚರಿಯ ಪೇಳಿದಳು ಪತಿಗಾಗ ।
ಸತಿಯೆ ನಿನ್ನಯ ಮನದಭೀಷ್ಟವ
ನತಿಮುದದಿ ಗೈವೆನೆನುತುಸುರಿದ
ರತಿ ಸುಲಭದೊಳ್ ತಮ್ಮಯ ವಿರಾಡ್ರೂಪ ತೋರಿಸುತ ॥

ಏನ ಹೇಳಲಿ ಸದ್ಗುಣಿಯಗುಣ
ವೇನ ಹೇಳಲಿ ಕರುಣಸಾಗರ
ನೇನ ಹೇಳಲಿ ವಿಬುಧಮೂರುತಿಯೆ ಮುಗುಳಿದವರವ ।
ಎನ್ನ ಮನದಲಿ ಬಲಿತಬಯಕೆ ಮ
ಗನ ಪಡೆವ ಮನರಥವನರಿದಾ
ಘನ್ನ ಮಹಿಮಾವಂತ ದತ್ತಾತ್ರೇಯ ಹರಸಿದನು ॥

ಸತಿಯ ನುಡಿಗಳ ಕೇಳುತಾಪಳ
ಸಂತಸದಿ ಕರುಣಿಸಿದ ವರದ ನುಡಿಗಳನರಿಯುತಲಿ ।
ಸಂತಸವತಾಳ್ದನಲವಿಂದಾ
ಸತಿಯು ಸಂತಸದೊಳಗೆ ತಾಂ ಬೆ
ರೆತು ಗುರುಚರಣ ಮಹಿಮೆಯನು ಕೊಂಡಾಡಿದ ಹರುಷದಿ ॥

ಧನ್ಯೆ ನೀನಹೆ ಗುರುವನುಗ್ರಹ
ವನೆ ಪಡೆದೆ ವಿಶ್ವದೊಡೆಯನ ಕಂ
ಡೆ ನಿನಗೆಣೆ ಯಾರುಂಟು ಭಾಗ್ಯದಲಿಯೆನುತ ಪೊಗಳಿದ ।
ಉನ್ನತಿಯ ಪಡೆಯೆನ್ನ ಪಿತರಿಂ
ದುನ್ನತಿಯ ಕಾಣೆನ್ನ ಕುಲಜರ್
ಮುನ್ನಮಿಂತೀಸುಕೃತ ಪಡೆದರಕಾಣೆ ನಾನೆಂದ ॥

ದತ್ತದೇವನು ಇತ್ತವರವನು
ಮತ್ತೆ ಕೇಳುತ ಪಳನುಲಿದನು
ದತ್ತದೇವನು ಬಂದ ಚರಣನೊಳು ಭಿಕ್ಷೆಯೀಯೆಂದು ।

ಕ್ಷೇತ್ರವಾಸಿಯು ತಾನಹನು ಮುನಿ
ಪೊತ್ತು ನೋಡದೆ ಭಿಕ್ಷೆಯೀವುದು
ಪೊತ್ತು ಕಾಯುವ ಪರಮ ಮೂರುತಿ ನಮ್ಮಭೀಷ್ಟಗಳ ।

ವರಹಡವು ಮಾಹೂರ ಕೊಲ್ಹಾ
ಪುರವು ಔದುಂಬರದ ವೃಕ್ಷದೊ
ಳುರದೆ ನೆಲೆಸಿಹನು ವರದತ್ತಾತ್ರೇಯ ಮೂರುತಿಯು ।
ಕುರುವಪುರ ಕುರುಗಡ್ಡಿ ಗಾಣಗ
ಪುರವು ಪಾಂಚಾಳೇಶ್ವರದೊಡನೆ
ನರಸವಾಡಿಗಳಲಿ ನೆಲೆಸಿ ಕರುಣಿಸುತಿಹ ವರವನು ॥

ಇಂತಿರುತ ದಿನಗಳುರುಳುತಲಾ
ಸತಿ ಧರಿಸಿದಳು ಪುಣ್ಯಪುರುಷನ
ಪತಿತಪಾವನನ ಪರಮನ ದತ್ತಗುರುವನುದರದಿ।
ಅತ್ರಿಮುನಿಸುತನೆನಿಸಿದಾತಗೆ
ಮತ್ತಿಳೆಯನುದ್ಧರಿಪ ನರಹರಿ
ಮೂರ್ತಿಗೆ ಜಗದ ಜನಕಗೆ ಜನನಿಯಾದಳಾ ಸುಮತಿ ॥

ಸತಿಗೆ ನೀಡಿದ ವರಕೆನುತಲಾ
ದತ್ತಮೂರುತಿ ಪಾದರೆಂದೆನಿ
ಸುತಲಿಳೆಯೊಳಗೆ ಕಠಿಣ ಭವದೊಳಗೆ ಜನಿಸಿದರಂದು ।
ಚಿತ್ತದೊಳು ಭಜಿಸುವ ಭಕುತರನು
ಪೊತ್ತು ಕಾಯುವ ಪರಮಮೂರುತಿ
ಯತಿಯರೂಪದಿ ತೋರಲೆಂದುದಿಸಿದನು ಜಗದೊಳಗೆ ॥

ಜನಿಸಿದಾ ಬಾಲಕಗೆ ಶ್ರೀಪಾದ
ದನೆನುತ ಹೆಸರಿಡುತ ಕರೆಸಿದರ್
ಜ್ಞಾನಿಗಳ, ಜೋಯಿಸರ, ಬರೆಯಿಸೆ ಜಾತಕವನಾಗ ।
ಜಾನದಲಿ ನೋಡಿ ನುಡಿದರಲಾ
ಜ್ಞಾನಿಗಳು ಪರಮಪುರುಷನಜಾ
ತನ ಹಿರಿಮೆಯನು ಮುಂದೆ ಪರಮಪುರುಷನೆನಿಸುವುದನು ॥

ಜಗದ ಜನರಿಗೆ ಗುರುವಹನಿವನು
ಮುಗುವೆನಿಸಿ ತೋರುತಿಹನೀತನು
ಅಗಣಿತಗುಣಗಣಿ ಜಗದ್ಗುರುವೆನಿಪನನು ಮನವಿರದೆ ।
ಜಗದೊಳಗ್ಗವೆನಿಸಿದ ಸನ್ಯಾ
ಸ ಗತಿಯುನಿಳೆಯೊಳಗೆ ಪಸರಿಸಲು
ಜಗವ ಬೆಳಗಲು ಬೆಳಗಿಹನಿಳೆಯೊಳೆಂದರಪರಲ್ಲಿ ॥

ಕಾಲವುರುಳಿತು ವರುಷ ಮರಳಿ ಸ
ಕಲಕಲಾನಿಪುಣನೆನಿಸುತ ಬೆಳೆ
ದೊಲವಿಂದಲಿ ಶ್ರೀಪಾದರೆನಿಸುತ ಮೆರೆಯೆ ।
ಕಾಲಬಂದಿದೆ ಮಗನ ಮದುವೆಗೆ
ಕಾಲ ಮೀರುವ ಮುನ್ನ ಮಾಳ್ಪುದು
ಕಾಲದಲಿ ನಡೆಸುವುದುಚಿತವೆಂದು ನುಡಿದಿರೆ ಹಿರಿಯರ್ ॥

ವಯಸು ಬಂದಿಹುದು ಮಗನೆ ನಿನಗೆ
ವಯಸಿದುವೆ ಮದುವೆಗಹುದೆನಿಸಿರೆ
ವಯಸ ಮೀರಿಹ ನಮ್ಮ ಮಾತಿಗೊಡಂಬಡು ಮದುವೆಯೊಳ್ ।
ಆಯುವಂತನೆನಿಸಿ ಸಕಲ ಸುಖ
ದಾಯವಂತನೆನಿಸಿ ಸುತರನು ಪ
ಡೆಯುತ ವಂಶದ ಪೆಸರನುಳಿಸೆಂದನುನಯವ ನುಡಿದರ್ ॥

ನಿನ್ನಯ ಮದುವೆ ನೋಡುವ ಬಯಕೆ
ಎನಗೆ ಸುಳಿದುದು ಮಗನೆ ಬಾಸಿಂಗ
ವನು ತೊಡಿಸುಪಾಸೆಯುದು ಪುಟಿಯುತಿದೆಯೆನ್ನೆದೆಯೊಳಗೆ ।
ನಿನ್ನ ಮದುವೆಯ ಸಡಗರದೊಳಗೆ
ಎನ್ನ ಮನ ನಲಿಯ ಬಯಸಿದೆ ನೀ
ಮನವ ಮಾಡುವುದು ಮದುವೆಗೆನುತ ಮಾತೆ ತಿಳುಹಿರಲ್ ॥

ರಾಗಗಳು ತನಗೇಕೆ ರಾಗಗ
ಳ ಗೊಡವೆಯದೇಕೆ ಭವದ ಸೋಂಕೇ
ಕೆ ಗತಿಯು ಬಯಸುವವಗೆ ಮುಕುತಿಯೆ ಗುರಿಯೆನಿಸೆ ।
ರಾಗಗಳ ಬಂಧನವ ಬಿಡಿಸಿ ವಿ
ರಾಗಿಯಾಗುತ ಮೆರೆವ ಧರುಮ ಸ
ರಾಗದೊಳು ಕರುಣಿಸಿ ಹರಸುವುದೆನುತ ಪದಕೆರಗಿದನ್ ॥

ಮಾಯೆಯೊಳು ಸಿಲುಕುತಲಿರೆ ಜನರು
ಮಾಯೆಗಂಜುತ ಮಾಯವಾಗಿಹ
ಆರ್ಯ ಯತಿಧರ್ಮವ ತಿರೆಯೊಳೂರೆಗೊಳಿಸುವ ಹದಕೆ ।
ಆರ್ಯೆ ನಿಮ್ಮಯ ಮನೆಯೊಳು ಬೆಳೆದೆ
ಮಾಯೆಯನು ಬಿಸುಡಿ ಮನತಿಳಿಯಿರಿ
ಮಾಯೆಯನು ಮೀರಿದವ ತಾನೆಂಬುದನರಿಯಿರೆಂದ ॥

ಹಿಂದೆ ಭಿಕ್ಷೆಗೆ ಬಂದಿರಲು ನೀ
ನಂದು ಬೇಡಿದ ವರವ ನೆನೆಸಿಕೊ
ಚಂದದೊಳು ವರದತ್ತದೇವನನೊಲಿಸಿರಲು ನೀನು ।
ಅಂದವಾದೊಂದು ವರವ ಕರುಣಿ
ಸಿದ ಮಗನ ಬಯಕೆಯ ನಿನಗೆ ಸಲಿ
ಸಿದುದ ನೆನೆಯೆಂದು, ತಿಳುಹೆ ತಿಳುಹಿದನು ಹರಿಯು ಮತಿಗೆ ॥

ಪುತ್ರಹೀನಳು ನಿನಗೆ ಭಿಕ್ಷೆಯ
ನಿತ್ಯತಕೆ ನೀನೆನಗೆ ಮುದದೊಳು
ಪುತ್ರನಾಪುದು ಮತಿಗೆ ಸುಳಿದುದು ಕಾವುದೆನ್ನನು ನೀ ।
ಪುತ್ರಕಾಂಕ್ಷೆಯೊಳಂದು ಬೇಡಲು
ದತ್ತಮೂರುತಿ ಕರುಣಿಸಿದೆ ನೀ
ದತ್ತವರಕಿಂದೆನ್ನೊಳಗೆ ಜನಿಸಿ ಮೆರೆಸಿದೆಯೊಲವಿಂ ॥

ಹರಿಹರಾದಿಗಳಂದೊಲಿಯುತಲಿ
ಭರದಿ ಸುತರೆಂದೆನಿಸುತಿಳೆಯೊಳು
ಹರಸೆ ಸತಿಯನಸುಯೆಯು ಬೆಸಸಿಸೊಳೊಂದುಗೂಡುತಲಿ ।
ವರದದತ್ತಾತ್ರೇಯನೆನಿಸುತ
ಹರಿಹರಜರಂಶಗಳೊಲಿಯುತಲಿ
ಮೂರು ಮುಖಗಳಪೊತ್ತುನಿಂತವ ನೀನೆ ಮುನಿವರನು ॥

ಎನಗೆ ನೀವೀಗಲನುಮತಿಯನ
ನುನಯದೀವುದು ಯತಿಯವೇಷಕೆ
ಅನುಗೊಳಿಸುವುದು ಧರ್ಮವನು ಪಾಲಿಸಲೊಡಬಡುವುದು ।
ಮನುಜಕುಲದೊಳು ಯತಿಯಧರ್ಮವ
ನೆ ನೆಲೆಗೊಳಿಸುವ ಕಜ್ಜದೊಳು ಜಯ
ವನೆ ಹರಸುವುದೆನುತೆರಗಿದ ಹರಿ ಮಾತೆಯ ಚರಣಕೆ ॥

ಕುರುಡನೋರ್ವನು ಹೆಳವನೋರ್ವನು
ಕರುಣೆಯಲಿ ಕೈಹಿಡಿವವರ ಕಾ
ಣೆ ರುಜೆಯುಡರಿ ಮಗನಿರದೆಂತು ಬದುಕುವುದಾದವುದು ।
ಮರಣ ಹೊಂದಲು ಮುಕ್ತಿದೊರೆವುದ
ಮರಪದವು ದೊರಕುವುದು ಸುತನಿರ
ಲಾರು ಎನಗಿನ್ನಾರು ಗತಿಯೆಂದಳಲಿದಳು ಮಾತೆ ॥

ಶೋಕಿಸುವ ಮಾತೆಯನು ಸಂತಯ
ಸಿ ಕರುಣಾಮೂರುತಿ ನೆರೆಯೊಳಿ
ರ್ದಕುರುಡ ಹೆಳವವರೆಡೆ ಕರುಣೆಯಲಿ ನೋಡುತಿಲಾಗ ।
ಆ ಕುರುಡನಿಗೆ ಕಣ್ಣುಬಂದುದು
ಸಕಲವೂ ಗೋಚರಿಸಿ ಹೆಳವನಿ
ಗಾಕ್ಷಣದೊಳಗೆ ಕಾಲುಬಂದುದು ಪಾದರಾ ಕೃಪೆಯೊಳ್ ॥

ಮಾರಜನಕನು ನಾನೆ ಮಾರನ
ಹರಿಸಿದವ ನಾನೆ ಮುರಳೀಧರ
ಮುರಹರನು ನಾನೆ ತ್ರಿಮೂರ್ತಿಯು ನಾನೆನುತ ತಿಳುಹಲ್ ।
ವರದ ವಿಶ್ವಾಕಾರದೊಳು ವಿ
ಶ್ವರಚನೆಯ ತೋರಿದನು ತನ್ನೊಳು
ಭರದೊಳಾ ಪುಣ್ಯಸತಿಪತಿಗಳಿಗಾಜಣದೊಳಂದು ॥

ಮಾತೆಯನು ವಂದಿಸಿ ಜನಕನನು
ಮತಿಯ ಪಡೆಯುತ ಜಗದ ಗುರು ತಾ
ಮತಿಯ ಪಡೆಯೆ ಗುರುವನರಸುತಲಿ ನಡೆದನಿಳೆ ತಿಳಿಯೆ ।
ಯತಿಯ ಧರ್ಮದ ಹೆಗ್ಗಳಿಕೆಯ ನಿ
ಯತಿಯಿಃನಿಳೆಯೊಳು ತೋರುವ ಮನದ
ಯತಿವರ ನಡೆದ ಮಾಜಗವು ನೋಡುತಿರೆ ಬೆರಗಾಗಿ ॥

ಮೂರು ವೇದವ ಬಲ್ಲವನೀತಗೆ
ಯಾರು ಸರಿಯಿಲ್ಲೀತನೆಣಿಕೆಗೆ
ಚಾರು ಮಂದಿರೊಳಗೆ ಬೆರಗ ಮಾಡಿಸಿದ ದೇವನಿವ ।
ಆರ ಎಣಿಕೆಗೆ ನಿಲುಕಬಲ್ಲುದು
ಪಾರಃಗಾಣದ ಭವದ ಸೋಂಕನು
ದೂರತಳ್ಳುತ ನಡೆವ ಧೀರಮತಿ ಯತಿಗಲ್ಲದಿರೆ ॥

ಪಾದ ಶ್ರೀಪಾದರೆನಿಸಿ ಪರಮ
ಪದವನರಸುತ ಹೊರಟು ಪರಮನ
ಪಾದವೆನಿಸಿದ ಕಾಶಿಕ್ಷೇತ್ರಕೆ ಬಂದು ನೆಲೆಸಿದರು ।
ಬದರಿ ಕೇದಾರಗಳ ಸುತ್ತಿಸು
ಳಿದು ಕಡೆಗೆ ಸದ್ಗತಿಗೆ ತವರೆನಿ
ಪ ದುಗುಡಗಳ ನಿವಾರಿಸುವ ಗೋಕರ್ಣಕ್ಷೇತಂದರ್ ॥

ನಿತ್ಯದೊಳು ಗುರುಕಥೆಯ ಪಠಿಸಲು
ಸತ್ಯದೊಳಗೀವ ಬಯಸೆ ವರವ
ಸತ್ಕಥೆಯ ಸಪ್ತಾಹದೊಳು ಭವದ ಪರಿಹರವಿಹುದು ।
ಅತಿಸುಲಭ ಮುಕುತಿಯೆನಿಪ ಗುರು ಚ
ರಿತ್ರೆಯನೋದುವವರಿಗೆ ನಿಜದಲಿ
ಸತ್ಪಥವ ತೋರುತಲಿ ಗುರು ಕರುಣೆಯನು ದೊರಕಿವುದು



# ಸಂತ ವನಿತಾ ರತ್ನಗಳು

ಶ್ರೀ ಸಿ. ಗೋವಿಂದಾಚಾರ್ಯ

ಗೃಹಲಕ್ಷ್ಮಿ

"ಸಾಧುಪರಿತ್ರಾಣ ಮತ್ತು ಧರ್ಮಸಂಸ್ಥಾಪನೆಗಾಗಿಯೇ ನಾನು ಅವತರಿಸುವೆನು" ಎಂದು ಭಗವಂತನು ತನ್ನ ಮಹಾಸಂಕಲ್ಪವನ್ನು ಪ್ರಕಟಿಸಿದ. ಆದರೆ ಮೂಢರಾದ ಮನುಜರು ಅವನನ್ನೂ ಅವನ ದಿವ್ಯವಾಣಿಯನ್ನೂ ಅಷ್ಟಾಗಿ ಲಕ್ಷಿಸಲಿಲ್ಲ. ಇಂತಹ ಅಜ್ಞಾನಿಗಳನ್ನು ಹೇಗಾದರೂ ಮಾಡಿ ಸನ್ಮಾರ್ಗಕ್ಕೆ ತರಬೇಕೆಂದು ಭಗವಂತನು ಮತ್ತೊಮ್ಮೆ ಸಂಕಲ್ಪಮಾಡಿದ, ತನ್ನ ಪರಮ ಭಕ್ತರೂ ಹಾಗೂ ನಿತ್ಯಕೈಂಕರ್ಯಪರರನ್ನು ಕರೆದು "ನೀವು ಭೂಲೋಕದಲ್ಲಿ ಜನಿಸಿ ಪಾಮರ ಕೋಟಿಯನ್ನು ಉದ್ಧಾರಮಾಡಿ" ಎಂದು ಆಜ್ಞಾಪಿಸುವನು. ಅವನ ಸಂಕಲ್ಪದಂತೆ ಭಾರತದ ವಿಭಿನ್ನ ಪ್ರಾಂತ್ಯಗಳಲ್ಲಿ ಆಯಾಯಾ ಕಾಲಕ್ಕೆ ಸಂತರು ಜನ್ಮತಾಳಿ 'ಭಕ್ತಿ' ಮತ್ತು 'ಪ್ರಾರ್ಥನೆ' ಎಂಬ ಸರಳ ಸಿದ್ಧಾಂತದ ಮೂಲಕ ಭಗವದನುಗ್ರಹಕ್ಕೆ ಪಾತ್ರರಾಗುವ ಮಾರ್ಗವನ್ನು ತೋರಿಸಿ ಮಹದುಪಕಾರ ಮಾಡಿದ್ದಾರೆ. ಈ ಸಂತರ ಬಳಗದಲ್ಲಿ ವನಿತೆಯರೂ ಸೇರಿದ್ದಾರೆ. ಸ್ತ್ರೀರತ್ನಗಳಾದ ಆಂಡಾಳ್, ಅಕ್ಕ ಮಹಾದೇವಿ ಮತ್ತು ಮೀರಾ—ಸ್ತ್ರೀ ಜೀವನಕ್ಕೆ ಅಗತ್ಯವಾಗಿರುವ ಪರಮಾತ್ಮ ಪ್ರಾಪ್ತಿಯಾವುದು? ಎಂಬುದನ್ನು ತೋರಿಸಿಕೊಟ್ಟಿದ್ದಾರೆ.

ಈ ಸ್ತ್ರೀತ್ರಯರ ಜೀವನದ ಅನೇಕ ವಿಚಾರಗಳಲ್ಲಿ ಸಾಮ್ಯವಿದೆ.—

1) ದೈವಾಂಶದಿಂದ ಜನಿಸಿದರು (ಆಂಡಾಳ್ ಭೂದೇವಿಯ ಅಂಶವೆಂದೂ, ಮಹಾದೇವಿ ಪಾರ್ವತಿಯ ಅಂಶವೆಂದೂ, ಮೀರಾ ಗೋಪಿಯೆಂದೂ ಭಾವನೆ)

2) ಮಧುರಭಾವ – ದೇವರನ್ನು ಪತಿಯಾಗಿ ಪಡೆಯುವುದು (ಪತಿ – ಪತ್ನಿ ಸಂಬಂಧದ) ಮಹತ್ತ್ವಾದುದನ್ನೇ ಬಯಸಿದರು.

3) ಕನಸಿನಲ್ಲಿ ದೇವರನ್ನು ಮದುವೆಯಾದುದನ್ನು ತಮ್ಮ ಕೃತಿಗಳಲ್ಲಿ ಹೇಳಿರುವುದು.

4) ಮೂವರ ಭಕ್ತಿಸಾಧನೆ ಒಂದೇ ರೀತಿಯದು

5) ಆತ್ಮ ನಿವೇದನೆ – ಅರ್ಚಾಮೂರ್ತಿಯಲ್ಲಿ ಐಕ್ಯವಾಗುವುದು.

6) ಶ್ರೇಷ್ಠ ಕವಯಿತ್ರಿಯರು ಮತ್ತು ತತ್ತ್ವಜ್ಞಾನಿಗಳು.

"ಭಕ್ತಿ ಎಂದರೆ ಭಗವಂತನನ್ನು ಪ್ರೇಮದಿಂದ ನೋಡುವುದು, ಮತ್ತು ಕ್ರಮೇಣ ಅವನಲ್ಲಿ ಗಾಢವಾದ ಆಸಕ್ತಿ ಹೊಂದುವುದು". ಆಂಡಾಳ್ ಈ ಮಾರ್ಗದಲ್ಲೇ ಭಗವಂತನನ್ನು ವಶಪಡಿಸಿಕೊಂಡ ಮಹಾನುಭಾವೆ. ವಟಪತ್ರಶಾಯಿಗೆ ಸಿದ್ಧಪಡಿಸಿದ ಹೂವಮಾಲೆಯನ್ನು ತಂದೆಗೆ ಗೊತ್ತಾಗದಂತೆ ತಾನು ಮುಡಿದು ಕನ್ನಡಿಯಲ್ಲಿ ನೋಡಿ ಆನಂದಪಟ್ಟು ಯಥಾಸ್ಥಾನದಲ್ಲಿ ಇಡುತ್ತಿದ್ದಳು. ನಂತರ ಈ ಹಾರವನ್ನು ಭಟ್ಟರು ದೇವರಿಗೆ ಸಮರ್ಪಿಸುತ್ತಿದ್ದರು. ಒಮ್ಮೆ ಇದು ಅವರ ಕಣ್ಣಿಗೆ ಬಿದ್ದು ಅಪಚಾರವಾಯಿತಲ್ಲಾ ಎಂದು ಬೇಸರಪಟ್ಟು ಅಂದು ಹೂವಮಾಲೆ ದೇವರಿಗೆ ಅರ್ಪಿಸಲಿಲ್ಲ. ಅಂದು ರಾತ್ರಿ ಭಗವಂತನು ಸ್ವಪ್ನದಲ್ಲಿ ಆಳ್ವಾರರಿಗೆ ಕಾಣಿಸಿಕೊಂಡು "ಅದೇ ಹಾರ ನನಗೆ ಪ್ರಿಯವಾದುದು ಅದನ್ನೇ ಸಮರ್ಪಿಸಿ" ಎಂದು ಹೇಳಿದ ಹಾಗಾಯಿತಂತೆ. ಆದ್ದರಿಂದ ಇವಳು 'ಶೂಡಿಕ್ಕೊಡುತ್ತ ಶುಡರ್ಕೊಡಿಯೇ' (ಪುಂಡರೀಕಾಕ್ಷರು) ಮತ್ತು ಕ್ರಮೇಣ ಮುಡಿದು ಕೊಟ್ಟು ಮಡದಿ ಎಂದು ಪ್ರಸಿದ್ಧಳಾದಳು. ಅವಳ ತೀವ್ರವಾದ ಭಕ್ತಿ ಪ್ರೇಯಸಿಯ ಪ್ರೇಮರೂಪ ತಾಳಿತು. ಆಕೆಯದು ಲೌಕಿಕ ಪ್ರೇಮವಲ್ಲ, ಅದು ಕೃಷ್ಣನ ಮೇಲಿನ ರಾಧೆಯ ಅಲೌಕಿಕ ಪ್ರೇಮದಂತೆ. ಇಡೀ ಜೀವನ ಒಂದು ಮಧುರ ಭಕ್ತಿಯ ಕಥೆಯಾಗಿದೆ. ತಾನು ವಧು ಎಂದು ಭಾವಿಸಿಕೊಂಡು ಭಗವಂತ (ವರ) ನಲ್ಲಿ ಒಂದಾಗಬೇಕೆಂದು ಹಂಬಲಿಸಿ ವಿಭವರೂಪದಲ್ಲಿ ಜೀವಾತ್ಮ ಅರ್ಚಾಮೂರ್ತಿ ರಂಗನಾಥನಲ್ಲಿ (ಪರಮಾತ್ಮ) ಐಕ್ಯವಾಗುವಳು.

ಅಂಬಿಕೆಯ ವರಪ್ರಸಾದದಿಂದ ಜನಿಸಿದವಳು ಮಹಾದೇವಿ. ಒಳ್ಳೆಯ ನಡೆನುಡಿಗಳಿಂದ ಅಕ್ಕಪಕ್ಕದ ಗೆಳತಿಯರಿಗೆ 'ಅಕ್ಕ' ಆದಳು. ಬಾಲಕಿಯಾಗಿದ್ದಾಗಲೇ ವಯಸ್ಸಿಗೆ ಮೀರಿದ ಇವಳ ಶಿವಭಕ್ತಿಯನ್ನು ಕಂಡು ಎಲ್ಲರೂ ವಿಸ್ಮಿತರಾದರು. ಶಿವನೇ ಗಂಡನಾಗಬೇಕೆಂದು ನಿರ್ಧರಿಸಿಕೊಂಡು ಅವನ ಪದತಲದಲ್ಲಿ ತನುಮನಗಳನ್ನು ಸಮರ್ಪಿಸಿದಳು.

ಆಂಡಾಳ್‌ನಂತೆ ಮೀರಾಳೂ ಕೃಷ್ಣ ಪ್ರೇಮಿ. ಗಿರಿಧಾರಿಯ ಸುಂದರ ವಿಗ್ರಹವನ್ನು ಒಬ್ಬ ಸಾಧುವಿನಿಂದ ಕಾಡಿ ಬೇಡಿ ಪಡೆದು ಜೀವನದುದ್ದಕ್ಕೂ



ದಿವ್ಯಪ್ರೇಮದ ಆನಂದವನ್ನು ಸವಿದಳು. ಇದು ಬೀಬಿನಾಚ್ಚಿಯಾರ್–ಶೆಲ್ವಪಿಳ್ಳೆ ದಿವ್ಯ ಚರಿತ್ರೆಯಂತೆ ಇದೆ. ಅವನಲ್ಲದೆ ತಾನು ಬದುಕುವುದಿಲ್ಲವೆಂದು ಸಂಕಲ್ಪಿಸಿದಳು. ಅವಳ ಜೀವನ ಕೃಷ್ಣ ಪೂಜೆಯಲ್ಲಿ ಲೀನವಾಗತೊಡಗಿತು. ಆಕೆಯ ಭಕ್ತಿಗೆ ಮೆಚ್ಚಿ ಗೋಪಾಲನು ತನ್ನ ಪ್ರಸನ್ನರೂಪ ತೋರಿಸಿ, ಅವಳೊಡನೆ, ಶ್ರೀರಾಮ ಸುಗ್ರೀವನ ಸಖ್ಯ ಅಪೇಕ್ಷಿಸಿದಂತೆ, ಸ್ನೇಹ ಮಾಡಿದ. ಸಂತ ಭಕ್ತರು ಇವಳನ್ನು ಗುರುವಿನಂತೆ ಕಾಣುತ್ತಿದ್ದರು.

ಸಕ್ಕೂಬಾಯಿಗೆ ಪರಬ್ರಹ್ಮನಾದ ಪಾಂಡುರಂಗನೇ ತಂದೆ, ರುಕ್ಮಾಬಾಯಿಯೇ ತಾಯಿ. ವಿಠಲನ ಎಲ್ಲ ಭಕ್ತರೂ ತನ್ನ ಒಡಹುಟ್ಟಿದವರೆಂಬ ಭಾವನೆ. ಅವ್ವೈಯಾರ್ ಗಣೇಶನ ಪರಮ ಭಕ್ತಳು. ಸುಬ್ರಹ್ಮಣ್ಯ, ಗಣೇಶರೊಡನೆ ಮಾತನಾಡಿರುವಳು. ಒಮ್ಮೆ "ಕೈಲಾಸಕ್ಕೆ ಹೋಗಿ ಬರೋಣ ಬಾ" ಎಂದು ನಾಯನಾರುಗಳು ಆಹ್ವಾನಿಸುವರು. "ನೀವು ಹೋಗಿ, ನಾನು ಪೂಜೆಯನಂತರ ನಂತರ ಬರುವೆನು" ಎಂದು ತಿಳಿಸುವಳು. ಇದನ್ನು ಪ್ರೇರೇಪಿಸಿದವನು ವಿನಾಯಕನೇ. ಅವನ ಪ್ರೇರಣೆಯಂತೆ ನಾಯನಾರುಗಳು ಕೈಲಾಸ ಸೇರುವ ಮುನ್ನ ಇವಳೇ ಅಲ್ಲಿರುವಳು.

ಆಂಡಾಳ್ ಜೀವನದಲ್ಲಿ ಈ ಸಾಮಾಜಿಕ ಅಥವಾ ಲೌಕಿಕ ಅಡಚಣೆಗಳಾವುವೂ ಕಂಡು ಬಂದಂತಿಲ್ಲ. ಆದರೆ ಮೀರಾ, ಅಕ್ಕ ಮತ್ತು ಸಕ್ಕೂಬಾಯಿಯವರು ಬೆಟ್ಟದಷ್ಟು ಕಷ್ಟಗಳನ್ನು ಅನುಭವಿಸಿದ್ದಾರೆ.

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಅರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿ ಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನೇ ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಅರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ

  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ

ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ. ತಿರುಪತಿ.

ಇದರಿಂದ ಅವರುಗಳಲ್ಲಿ ವಿರಕ್ತಿಯು ಹೆಚ್ಚಾಯಿತು. ದೇವರೇ ಗತಿ ಎಂದು ಕೊನೆಯವರೆಗೂ ತಮ್ಮ ಪಾರತಂತ್ರ್ಯವನ್ನು ಅನುಸಂಧಾನ ಮಾಡಿಕೊಂಡು ಬರುವರು. ಅಕ್ಕಮಹಾದೇವಿಯದು ಕಹಿಯಾದ ದಾಂಪತ್ಯ ಜೀವನ. ಇವಳ ಸುಂದರ ರೂಪಕ್ಕೆ ಮಾರುಹೋಗಿ ಜೈನ ಧರ್ಮಿ ಕೌಶಿಕ ರಾಜ (ಶಿಶುಪಾಲನಂಥವನು) ಇವಳನ್ನು ಮದುವೆಯಾಗುವನು. ಇವಳು ಶಿವಧ್ಯಾನ (ವ್ರತ) ದಲ್ಲಿರುವಾಗ, ರಾಜನು ಶಿವಭಕ್ತರನ್ನು ಅಪಮಾನಗೊಳಿಸಿದ. ಇಂತಹ ಜಂಗಮದ್ರೋಹವನ್ನು ಸಹಿಸಲಾರದೆ ವೈಭವಯುತವಾದ ಜೀವನವನ್ನು ತೊರೆದು ಎಲ್ಲವನ್ನೂ ತ್ಯಜಿಸಿ ವಿರಕ್ತಿಯಿಂದ ಬೆತ್ತಲೆಯಾಗಿ ಕೇಶವನ್ನೇ ವಸ್ತ್ರವನ್ನಾಗಿ ಮಾಡಿಕೊಂಡು ಕಲ್ಯಾಣಕ್ಕೆ ಪ್ರಯಾಣವಾಗಿ ನಂತರ ಶ್ರೀಶೈಲಕ್ಕೆ ತೆರಳಿ ಶಿವೈಕ್ಯವಾಗುವಳು–ದಿವ್ಯಗತಿಯನ್ನೇ ಹೊಂದುವಳು. ಮೀರಾ ಸಮಾಜಕ್ಕೆ ಹೆದರಿ ಭೋಜರಾಜನನ್ನು ಮದುವೆಯಾದರೂ ಇವಳ ಮನಸ್ಸಿನ ತುಂಬ ಗಿರಿಧಾರಿಯೇ ನೆಲೆಸಿದ್ದ "ಬೇರಾರಿಗೂ ಇಲ್ಲಿ ಜಾಗವಿಲ್ಲ" – ಎಂಬ ಇವಳು ಪರಭಕ್ತಿಯು ಕೃಷ್ಣನನ್ನು ಹೃದಯದಲ್ಲೇ ಇರುವಂತೆ ಮಾಡಿತು. ಇವಳ ಹರಿಸೇವೆಯನ್ನು, ಆನಂದದ ಅತಿಶಯದಲ್ಲಿ ಭಾವೋದ್ರೇಕದಿಂದ ನರ್ತಿಸುವುದನ್ನೂ (ಪಗ, ಘುಂಘ್ರು ಬಾಂಧ ಮೀರ ನಾಚೀರೇ) ದೇವಸ್ಥಾನ ಭಜನಾಮಂದಿರಗಳಲ್ಲಿ ಸಾಧು ಸಂತರೊಡನೆ ಭಕ್ತಿಯುತವಾದ ಭಜನೆಗಳಲ್ಲಿ ಭಾಗವಹಿಸುವುದನ್ನು ಕಂಡು, ಎಲ್ಲರೂ ಇವಳನ್ನು ಕೀಳಾಗಿ ಕಂಡರು. ಅಕ್ಬರನು ಮಾರುವೇಷದಲ್ಲಿ ಬಂದು ರತ್ನ ಹಾರವನ್ನು ಸಮರ್ಪಿಸಿದ್ದ – ಬಂಧುಗಳು ಇವಳನ್ನು ಅರಿಯದೆ 'ಹುಚ್ಚಿ', 'ಭಿಕಾರಿ', 'ಅಲೆಮಾರಿ' ಎಂದು ದೂರಿದರು. ರಾಜನ ತಂಗಿಯಿಂದ ಹೆಚ್ಚು ಕಿರುಕುಳ ಬರುತ್ತಿತ್ತು. ವಿಷಕುಡಿಸುವುದು, ಹೂವು ಹಣ್ಣುಗಳ ಬುಟ್ಟಿಯಲ್ಲಿ ಹಾವನ್ನಿಡುವುದು ಮತ್ತು ಇನ್ನೂ ವಿವಿಧ ಕುತಂತ್ರಗಳಿಂದ ಬಂಧುಗಳು ಇವಳ ಹತ್ಯೆಗೆ ಹವಣಿಸುತ್ತಿದ್ದರು. ವಿರೋಧಿಗಳ ಕಿರುಕುಳವನ್ನು ತಾಳಲಾರದೆ ಪ್ರಾಣತ್ಯಾಗ ಮಾಡಲು ಹೋದಾಗ ಕೃಷ್ಣನೇ (ಪ್ರಹ್ಲಾದ ಪರಿಪಾಲನೆಯಂತೆ) ಬಂದು ಕಾಪಾಡುವನು. ಕ್ರಮೇಣ ಅರಮನೆಯನ್ನು ತ್ಯಜಿಸಿ ಮಥುರಾ ದ್ವಾರಕೆಗಳಿಗೆ ತೆರಳುವಳು. ವಿಧವೆಯಾದ ನಂತರ ಗೋಪಾಲನ ಮೇಲೆ ಭಕ್ತಿ ಇನ್ನೂ ಗಾಢವಾಯಿತು. ದ್ವಾರಕೆಯ ರಣಛೋಡ್‌ಜಿ ಮಂದಿರದಲ್ಲಿ ಅಮರಳಾಗುವಳು.

ಅವ್ವೈಯಾರು ಸುಂದರ ತರುಣಿ. ಯೌವನ ಎಂದಿದ್ದರೂ ಸಮಸ್ಯೆಯೆಂದು ಲೌಕಿಕ ಜೀವನದಲ್ಲಿ ಆಸಕ್ತಿಯನ್ನು ತೊರೆಯುವಳು. ಯೌವನ ಹೋಗಿ ವೃದ್ಧಾಪ್ಯ ಬರಲೆಂದು ವರಪಡೆದು ವೃದ್ಧಳಾಗುವಳು. ಪಾಂಡುರಂಗನ ಭಕ್ತಳಾದ ಸಕ್ಕೂಬಾಯಿಗೆ ಅತ್ತೆಯ ಉಪಟಳ ಮತ್ತು ಗಂಡನ ಅಸಹಾಕಾರ. ಸೊಸೆಯ ಅನುಪಮ ಭಕ್ತಿ ಅತ್ತೆಗೆ ಹಿಡಿಸದೆ ಇವಳಿಗೆ ಅನೇಕ ಕಷ್ಟಗಳನ್ನು ಕೊಟ್ಟರೂ ಅವರ ಮೇಲೆ ಇವಳಿಗೆ ಸ್ವಲ್ಪವೂ ಕೋಪವಿಲ್ಲ. ಪಾಂಡುರಂಗನೇ ಇವಳನ್ನು ರಕ್ಷಿಸುವನು.

ಈ ಸಂತ ಮಹಿಳೆಯರು ತಮ್ಮ ಆಧ್ಯಾತ್ಮಿಕ ಅನುಭವವನ್ನು ಗದ್ಯ–ಪದ್ಯ ರೂಪದಲ್ಲಿ ವ್ಯಕ್ತಪಡಿಸಿದ್ದಾರೆ. ವಯಸ್ಸಿನೊಂದಿಗೆ ಜ್ಞಾನಾಭಿವೃದ್ಧಿಯೂ ಆಗ ತೊಡಗಿತು. ಇವರುಗಳು ಸಂಸ್ಕೃತದಲ್ಲಿ ವ್ಯವಹರಿಸದೆ ತಮ್ಮ ಪ್ರಾದೇಶಿಕ ಭಾಷೆಯಲ್ಲಿ ಮಾತನಾಡಿದ್ದಾರೆ. ಇವರ ಕೃತಿಗಳಲ್ಲಿ ತತ್ತ್ವ ಮತ್ತು ಬೋಧನೆ ಎರಡೂ ಇವೆ.

'ತಿರುಪ್ಪಾವೈ' ಮತ್ತು 'ನಾಚ್ಚಿಯಾರ್ ತಿರುಮೊಳಿ' ಗೋದಾದೇವಿಯ ಲೋಕೋತ್ತರ ಪ್ರಬಂಧಗಳು. ಇಲ್ಲಿ ಮುಖ್ಯವಾಗಿ ಕಾಣುವುದು ಕೃಷ್ಣ ಪ್ರೇಮ. 'ತಿರುಪ್ಪಾವೈ' ಎಂದರೆ ಭಗವಂತನನ್ನು ಪತಿಯಾಗಿ ಪಡೆಯಲು ಬಾಲ್ಯದಲ್ಲಿ ಮಾನಸಿಕವಾಗಿ ಆಚರಿಸಿದ ಒಂದು ಶ್ರೇಷ್ಠ ವ್ರತ. ಮಾರ್ಗಶೀರ್ಷ ಮಾಸದಲ್ಲೇ ಏಕೆ ಆಂಡಾಳ್ ಈ ವ್ರತವನ್ನು ಆಚರಿಸಿರುವುದು ಎಂದರೆ 'ಮಾಸಾನಾಂ ಮಾರ್ಗಶೀರ್ಷೋಹಂ'. (ಗೀ. ೧೦–೩೫) ಈ ದಿವ್ಯಕೃತಿಗಳಲ್ಲಿ ಶ್ರೀಕೃಷ್ಣನ ಲೀಲಾನುಭವದ ವಿಷಯವೇ ಅಡಗಿದೆ. ಇದರಲ್ಲಿ ಆಂಡಾಳ್ ತಾನು ಗೋಪಿ ಎಂದು ಭಾವಿಸಿಕೊಂಡಿದ್ದಾಳೆ. ಸೀತೆಗೆ ರಾಮನನ್ನು ವಿವಾಹವಾಗಲು ರುದ್ರಧನುಸ್ಸು ಹೇಗೆ ಸಾಧನವಾಯಿತೋ ಹಾಗೆ ಆಂಡಾಳ್‌ಗೆ ಗೋಪಿಕಾ ಭಾವನೆ ಸಾಧನವಾಯಿತು. ಕೃಷ್ಣಸಂಬಂಧದಿಂದ ಇವಳ ಸೂಕ್ತಿಗಳಿಗೂ ಮಹಿಮೆ ಬಂತು. ಇವಳು ಸಮರ್ಪಿಸಿದ ಪೂಮಾಲೆ ಮತ್ತು ಪಾಮಾಲೆ (ಶ್ರೀಸೂಕ್ತಿಮಾಲೆ) ಎರಡೂ ಒಬ್ಬನನ್ನು ಅವಲಂಬಿಸಿದೆ–ಭಗವಂತ. ಈ ಅಮೋಘ ಕೃತಿಯು ಶಾಸ್ತ್ರಾರ್ಥ, ಧ್ವನ್ಯರ್ಥ ಮತ್ತು ವಿಶೇಷಾರ್ಥಗಳಿಂದ ಕೂಡಿದೆ. ಉದಾ: ನೋತ್ತುಚ್ಚುವರ್ಗಂ (ತಿ. 10). ಇಲ್ಲಿ ಸ್ವರ್ಗ ಎಂದರೆ ಸಾಮಾನ್ಯಾರ್ಥದಲ್ಲಿ ಸುಖಲೋಕವೆಂದೂ, ವಿಶೇಷಾರ್ಥದಲ್ಲಿ ಭಗವದಾನಂದವನ್ನು ಪಡೆಯುವ ದಿವ್ಯಲೋಕವಾದ ಪರಮಪದವೆಂದೂ ಅರ್ಥವಾಗುವುದು. "ಕರವೈಗಳ್ ಪಿನ್‌ಸೆನ್ರು ಕಾನಂ ಶೇರ್‌ನ್ದು ಉಣ್ಬೋಂ"–(3.28) ಗೋವುಗಳನ್ನು ಹಿಂಬಾಲಿಸಿ ಕಾಡಿನಲ್ಲಿ ಎಲ್ಲರೂ ಒಟ್ಟಿಗೆ ಸೇರಿ ಭೋಜನ ಮಾಡೋಣ ಎಂಬುದು ಸಾಮಾನ್ಯಾರ್ಥ. ವಿಶೇಷಾರ್ಥದಲ್ಲಿ – ಸಂಸಾರಿಗಳೂ ಮತ್ತು ಅಜ್ಞಾನಿಗಳೂ ಆದ ನಾವು ಕಾಡಿಗೆ ಹೋಗುವುದು ತಪಸ್ಸು ವೈರಾಗ್ಯಗಳಿಂದಲ್ಲ, ಭುಜಿಸುವುದಕ್ಕಾಗಿಯೇ–ಅದೊಂದೆ ನಮಗೆ ಗೊತ್ತಿರುವುದು. 'ನಾರಿಮಲೈ' ಎಂಬ ಇಪ್ಪತ್ತಮೂರನೆಯ ಪದ್ಯಕ್ಕೆ ಅತಿಹೆಚ್ಚಿನ ವಿವರಣೆಯಿದೆ. ಪರಬ್ರಹ್ಮ ಸ್ವರೂಪ, ಉಪಾಯ ಜೀವಾತ್ಮಸ್ವರೂಪ, ಶರಣಾಗತಿ, ಪುರುಷಾರ್ಥ ಎಂಬ ಅರ್ಥಪಂಚಕ ವಿವರಣೆಯೂ ಇದೆ. ಆದಿಭಾಗದ ಪದ್ಯಗಳಲ್ಲಿ ಗೋದೆಯು ಹರಿನಾಮಸ್ಮರಣೆ, ಹರಿಗುಣ ವರ್ಣನೆ, ಅವನ ವ್ಯೂಹರೂಪಗಳ ವರ್ಣನೆ ಮತ್ತು ತಾನು ನಡೆಸುವ ವ್ರತಕ್ರಮವನ್ನು ಹೇಳಿ ಇಹಪರದಲ್ಲಿ ಇದೇ ಶ್ರೇಷ್ಠವೆಂದು ವ್ಯಕ್ತಪಡಿಸಿದ್ದಾಳೆ. ಸ್ವಾಪದೇಶದಲ್ಲಿ ಇದು ಆಚಾರ್ಯನ ಗುಣ ಕರ್ತವ್ಯಗಳೆಂದೂ ಮತ್ತು ಅವರನ್ನು ಆಶ್ರಯಿಸಿ ಸೇವೆಮಾಡುವುದೇ ಸುಖಕರವೆಂದು ಅರ್ಥವಾಗುವುದು. "ಎಂದೆಂದೂ ನಾವು ನಿನಗೆ ದಾಸರಾಗಿ ಸೇವೆ ಸಲ್ಲಿಸುತ್ತೇವೆ" ಎಂಬ ದಾಸ್ಯಭಾವವನ್ನು 29 ನೆಯ ಪದ್ಯದಲ್ಲಿ ನೋಡಬಹುದು– "ಉನಕ್ಕೆ ನಾಮಾಳ್ ಚೆಯ್‌ವೋಮ್". ಕಾವ್ಯಾಂಶಗಳಿಂದಲೂ ಇದು ಸುಂದರವಾಗಿದೆ. ಪ್ರತಿಪದ್ಯದಲ್ಲಿ "ಏಲೋರೆಂಪಾವೈ" ಎಂಬ ಪಲ್ಲವಿಯಿದೆ. ಕಲಿಯನರು (ಮದಲ್) ಸೂರದಾಸರು ಸ್ತ್ರೀಭಾವನೆಯಿಂದ ದೇವರನ್ನು ಒಲಿಸಿಕೊಳ್ಳಲು ಪ್ರಯತ್ನಿಸಿದ್ದಾರೆ "ಸ್ತ್ರೀಪ್ರಾಯಂ ಇತರತ್ ಸರ್ವಂ" ಎಂಬಂತೆ ಅವನೊಬ್ಬನೇ ಪರಮಪುರುಷ, ಮಿಕ್ಕೆಲ್ಲರೂ ಸ್ತ್ರೀಯರು ಎಂದು ಆಂಡಾಳ್ ವ್ಯಕ್ತಪಡಿಸಿದ್ದಾಳೆ. (ಪೇಯ್ ಪೆಣ್ಣೆ, ತಿ–7) ಮೀರಾಳದು ಇದೇ ಭಾವನೆ–ಸಹಜವಾದ ಹೆಣ್ಣು ಹೃದಯದ ಭಾವನೆ. ಸೇವೆ, ಸ್ನೇಹ ಮತ್ತು ಪ್ರೇಮ ಭಾವನೆಗಳು ಅವಳ ಗೀತೆಯಲ್ಲಿ ವ್ಯಕ್ತವಾಗಿವೆ. "ನನ್ನನ್ನು ನಾನು ಗಿರಿಧಾರಿಗೆ ಮಾರಿಕೊಂಡಿದ್ದೇನೆ", "ಅವನು ನನ್ನ ಅಜನ್ಮ ಸಹಪಾಠಿ. ನಾನು ಅವನವಳು" ಎಂದು ತನ್ನ ಹಾಡಿನಲ್ಲಿ ಹೇಳಿದ್ದಾಳೆ. ಇಲ್ಲಿ ಕಾಣುವುದು ಸಂಪೂರ್ಣ ಶರಣಾಗತಿ ಭಾವ. ಇವಳ ಅನನ್ಯ ಭಕ್ತಿ ಶರಣಾಗತಿಯಾಗಿ ರೂಪಗೊಂಡಿತು. "ಮನರೆ ಪರಸ ಹರಿಕೆ ಚರಣ" – ಅವನನ್ನು ಬೇರೆಲ್ಲೂ ಹುಡುಕಬೇಕಾಗಿಲ್ಲ, ನಮ್ಮ ಹೃದಯದಲ್ಲೇ ಇದ್ದಾನೆ – ಎಂದು ಅವನ ಹಾರ್ದರೂಪವನ್ನು ಉಲ್ಲೇಖಿಸಿದ್ದಾಳೆ, ಭಕ್ತಿಮಾರ್ಗವಿನಹ ಬೇರೆ ಮಾರ್ಗಗಳಿಂದ ಕೃಷ್ಣನನ್ನು ಸೇರುವುದು ಕಠಿಣ ಎಂಬ ಗೂಢಾರ್ಥವೂ ಇದರಲ್ಲಿದೆ. ಭಕ್ತಾಂಜನೇಯನ ಆದರ್ಶವನ್ನೇ ಅನುಸರಿಸಿ ಸೇವಾಭಾವವನ್ನು ತನ್ನ ಕೃತಿಯಲ್ಲಿ ಸೂಚಿಸಿದ್ದಾಳೆ. ಕೃಷ್ಣನನ್ನು ಗುರುವಿನಂತೆ ಕಂಡಿರುವುದನ್ನು ಕೆಲವು ಪದ್ಯಗಳಲ್ಲಿ ಕಂಡುಬರುವುದು. "ಮೀರಾಕೆ ಪ್ರಭು" ಇವಳ ಕಾವ್ಯನಾಮಾಂಕಿತ.

ಅಕ್ಕಮಹಾದೇವಿ ಬಸವಣ್ಣನ ಕ್ರಾಂತಿಯಲ್ಲಿ ಮತ್ತು ವೀರಶೈವ ಮತಪ್ರಚಾರದಲ್ಲಿ ಶ್ರಮಿಸಿದ್ದಾಳೆ. ಇದಕ್ಕೆ "ಯೋಗಾಂಗ ತ್ರಿವಿಧಿ (ತ್ರಿಪದಿ)" ಎಂಬ

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಅರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸ ಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಇವಳ ಗ್ರಂಥನೇ ಸಾಕ್ಷಿ. ಧಾರ್ಮಿಕ ಗ್ರಂಥಗಳನ್ನು ಸ್ವತಃ ತಾನೇ ಅಭ್ಯಾಸ ಮಾಡಿದಳು. ಅಕ್ಕ ಮತ್ತು ವಚನ ಬಂದು ನಾಣ್ಯದ ಎರಡು ಮುಖದಂತೆ. ಭಕ್ತಿಪೂರ್ಣವಾದ ವಚನಗಳು ಮತ್ತು ಸೂಕ್ತಿಗಳು ಅವಳ ಸ್ವಂತ ಅನುಭವದಿಂದ ಬಂದದ್ದು. ಸಗುಣ, ನಿರ್ಗುಣ ಮತ್ತು ಸದ್ಭಕ್ತಿ ಮುಂತಾದ ಸನ್ಮಾರ್ಗಗಳಲ್ಲಿ ಶಿವಭಕ್ತನು ನಡೆಯಬೇಕೆಂದು ಸಾರಿದಳು. ಭಕ್ತಿಯಿಂದ ಮಾತ್ರ ಪರಬ್ರಹ್ಮನನ್ನು ಸಾಕ್ಷಾತ್ಕರಿಸಿಕೊಳ್ಳಬಹುದು. ವೇದಶಾಸ್ತ್ರಗಳಿಂದ ಸಾಧಿಸಲಾಗದು ಎಂದು ಹೇಳಿ ತನ್ನ ನಿರಂತರವಾದ ಭಕ್ತಿಯನ್ನು ತೋರಿಸಿದಳು. ಕಲ್ಯಾಣದಲ್ಲಿ ಇವಳ ಸತ್ತ್ವ ಪರೀಕ್ಷೆ ಆಯಿತು. ಜಯಶೀಲಳಾದಳು. ಅಲ್ಲಮಪ್ರಭುವಿನೊಡನೆ ವಾದಸರಣಿಯಲ್ಲೂ('ಶೂನ್ಯ ಸಂಪಾದನೆ'-ಗ್ರಂಥ) ಗೆದ್ದು ಎಲ್ಲರಿಂದ ಕೊಂಡಾಡಲ್ಪಟ್ಟಳು. ಇವಳ ಬಾಯಿಂದ ಯಾವಾಗಲೂ ಶಿವತತ್ತ್ವವೇ ಹೊರಡುತ್ತಿತ್ತು. ಇವಳ ವಚನಗಳು ಕಾವ್ಯಮಯವಾಗಿಯೂ ಮತ್ತು ಶಿವಾನುಭವದ ಮಹಿಮೆಯಿಂದಲೂ ಕೂಡಿದೆ. ಕಲ್ಯಾಣದ ಮಹಿಮೆಯನ್ನು ಇದರಲ್ಲಿ ಉಲ್ಲೇಖಿಸಿದ್ದಾಳೆ. ಇವಳಿಂದ ಧರ್ಮರಹಸ್ಯ ಎಲ್ಲರಿಗೂ ತಿಳಿಯುವಂತಾಯಿತು. ಬಸವಣ್ಣ, ಅಲ್ಲಮರಂತೆ ಇವಳೂ ಕೂಡ ಸಮಾಜ ಸುಧಾರಕಳೂ ಆಗಿದ್ದಾಳೆ. ಇವಳ ನೀತಿತತ್ತ್ವದ ಕೆಲವು ಉದಾ :- (1) "ಸತ್ಸಂಗವ ಮಾಡುವುದು ಹೊಸಿದ ಬೆಣ್ಣೆಯ ತೆಗೆದುಕೊಂಬಂತೆ". (2) ಸಮಾಜದಲ್ಲಿ ಸ್ವಾಭಾವಿಕವಾಗಿ ಬರುವ ಕಷ್ಟಗಳನ್ನು ಧೈರ್ಯದಿಂದ ಎದುರಿಸಬೇಕು ಎಂಬುದನ್ನು 'ಬೆಟ್ಟದಾ ಮೇಲೊಂದು ಮನೆಯ ಮಾಡಿ ಮೃಗಗಳಿಗೆ ಅಂಜಿದೊಡೆಂತಯ್ಯ' ಎಂಬ ವಚನದಲ್ಲಿ ಮನದಟ್ಟಾಗಿದೆ. (3) ಸಂಸಾರಕಷ್ಟ, ನಮಗೂ ಇರುವ ಸಂಬಂಧವನ್ನು "ಹಾವಿನ ಹಲ್ಲು ಕಳೆದು ಹಾವನಾಡಿಸಬಲ್ಲಡೆ ಹಾವಿನ ಸಂಗವೇ ಲೇಸು" ಎಂಬ ವಚನದಲ್ಲಿ ತೋರಿಸಿದ್ದಾಳೆ. (4) ತನುಮನಕರಗಬೇಕು. ಅರಿವು ಭಾವಶುದ್ಧವಿರಬೇಕು—ಎಲ್ಲಕ್ಕಿಂತ ಆತ್ಮಶುದ್ಧಿ ಬಹುಮುಖ್ಯ—ಇಲ್ಲದಿದ್ದರೆ ಚೆನ್ನಮಲ್ಲಣ್ಣ ಒಲಿಯುವುದಿಲ್ಲ—"ತನು ಕರಗದವರಲ್ಲಿ ಪುಷ್ಪವನೊಲ್ಲೆಯಯ್ಯಾ ನೀನು, ಮನ ಕರಗದವರಲ್ಲಿ ಗಂಧಾಕ್ಷತೆಯನ್ನೊಲ್ಲಯ್ಯ ನೀನು".

ಅವ್ವೈಯಾರ್ ಒಬ್ಬ ನೀತಿ ಬೋಧಕಳು. ಯೋಗತತ್ತ್ವಗಳಿಂದ ಕೂಡಿದ 'ವಿನಾಯಕರ್ ಅಗವಲ್' ಅವಳ ಪ್ರಥಮ ಕೃತಿ. ಮಕ್ಕಳಿಗೆ ನೀತಿ ಬೋಧಿಸುವ 'ನೀತಿವೇ ಣ್ಬ' (ಚತುಷ್ಪದಿ) ಇವಳ ಮತ್ತೊಂದು ಕೃತಿ. ಈ ಸ್ತ್ರೀರತ್ನಗಳ ಭಕ್ತಿಕಾವ್ಯಗಳು ಭಾರತೀಯ ಸಾಹಿತ್ಯಾ ಭಂಡಾರವನ್ನು ಶ್ರೀಮಂತಗೊಳಿಸಿವೆ. ಅನೇಕ ಕಾವ್ಯತಜ್ಞರು, ಲೇಖಕರು, ಸಾಹಿತಿಗಳು ಮತ್ತು ಆಚಾರ್ಯರು ವಿವಿಧರೀತಿಯಲ್ಲಿ ವ್ಯಾಖ್ಯಾನವನ್ನು ಮತ್ತು ವಿಶೇಷಾರ್ಥಗಳನ್ನು ಕೊಟ್ಟಿದ್ದಾರೆ. ಹರಿಹರನು ಅಕ್ಕಮಹಾದೇವಿಯ ಕಾವ್ಯಗಳ ಬಗ್ಗೆ ತನ್ನದೇ ಆದ ಶೈಲಿಯಲ್ಲಿ ರಗಳೆ ಬರೆದಿದ್ದಾನೆ. ತುಳಸೀದಾಸರು ಮೀರಾಕೃತಿಗಳನ್ನು ಕೊಂಡಾಡಿದ್ದಾರೆ. ಪರಾಶರ ಭಟ್ಟರ 'ಪ್ರಪನ್ನಾಮೃತ'ದಲ್ಲಿ ಮತ್ತು 'ವ್ಯಾಖ್ಯಾನ ಚಕ್ರವರ್ತಿ' ಪೆರಿಯವಾಚ್ಚಾನ್ ಪಿಳ್ಳೈಯವರ 'ಮುವ್ವಾಯಿರಪ್ಪಡಿ'ಯಲ್ಲಿ ಆಂಡಾಳ್ ಬಗ್ಗೆ ವಿಸ್ತಾರವಾದ ವರ್ಣನೆ ಇದೆ. ರಾಮಾನುಜ ದಿವಾಕರರು ಮಾಧೂಕರಕ್ಕೆ ದಯ ಮಾಡಿಸುವಾಗಲೆಲ್ಲಾ ತಿರುಪ್ಪಾವೈ ಪಠಿಸುತ್ತಾ ಬರುತ್ತಿದ್ದರಂತೆ. ಅವರಿಗೆ "ತಿರುಪ್ಪಾವೈ ಜೀಯರ್"ಎಂದು ಹೆಸರು. ಗೋದೆಯ ತವರೂರಾದ ಶ್ರೀವಿಲ್ಲಿಪುತ್ತೂರಿನ ದಿಕ್ಕೇ ಶ್ರೇಷ್ಠವಾದುದೆಂದು ದೇಶಿಕಾಚಾರ್ಯರು ತಮ್ಮ ಗೋದಾಸ್ತುತಿಯಲ್ಲಿ ದಕ್ಷಿಣದಿಕ್ಕನ್ನು ಪ್ರಶಂಸಿಸಿದ್ದಾರೆ. 'ಕೂಡಾರೈ ವೆಲ್ಲುಂ ಶೀರ್ ಗೋವಿಂದ' (ತಿ-27) ಎಂಬುದು ತಿರುಪತಿ ಗೋವಿಂದನನ್ನು ಕುರಿತ ವಿಷಯವೆಂದು ಮತ್ತು ಗೋದೆಯು ಗೋವಿಂದನನ್ನು ವಿವಾಹವಾಗಲು ಇಷ್ಟಪಟ್ಟಳೆಂದು (ವೆಂಗಡವರ್ಕೆನ್ನೈವಿಧಿ) ವಿವರಣಾತಜ್ಞರಾದ ದೊಡ್ಡಯ್ಯಾಚಾರ್ ಸ್ವಾಮಿಗಳು ಅಭಿಪ್ರಾಯಪಟ್ಟಿದ್ದಾರೆ. "ಭೋಕ್ತುಂ ತವ ಪ್ರಿಯತಮಂ ಭವತೀವ ಗೋದೆ" (ಗೋದಾಸ್ತುತಿ) ಎಲ್ಲಾ ಸಂತರುಗಳಿಗಿಂತ ಆಂಡಾಳ್‌ಗೆ ಶ್ರೇಷ್ಠತೆ ಇದೆ. ಪ್ರತಿಜನ್ಮದಲ್ಲಿಯೂ ಇಂತಹ ಭಗವದನುಭವವೇ ಬೇಕೆಂಬ ಹೆಬ್ಬಯಕೆ ಅವಳದಾಗಿದೆ. ಇವಳ ಭಗವದನುಭವ ರಸಭರಿತವಾದುದು. (ಎಳ್ಳೇಳು ಪಿರವಿಕ್ಕುಂ ಉನ್ ತನ್ನೋಡುತ್ತೋಮೆ ತಿ-29). ಶ್ರೀವೈಷ್ಣವ ಧರ್ಮದ ಇತಿಹಾಸದಲ್ಲಿ ಆಂಡಾಳ್‌ನ ಸ್ಥಾನ ರತ್ನಹಾರದಲ್ಲಿ ನಾಯಕಮಣಿಯಂತೆ ಅತ್ಯಂತ ಹಿರಿದಾದುದು, ಇವಳು ಮಾಡಿದ ವ್ರತ ಆದರ್ಶವಾಗಿದೆ. ಎಲ್ಲಾ ಕನ್ಯಾಮಣಿಗಳು ಶುಭಕಾರ್ಯಗಳಿಗೆ ಮುಂಚೆ ವ್ರತವನ್ನಾಚರಿಸಿ ದೇವತಾರಾಧನೆಯನ್ನು ಮಾಡಬೇಕೆಂಬ ದೈವಿಕ ವಿಧಿ, ಅನಾದಿಕಾಲದಿಂದ ಏರ್ಪಟ್ಟಿದೆ. ಎಲ್ಲ ದಿವ್ಯದೇಶಗಳಲ್ಲಿ ಗೋದಾದೇವಿಯ ವಿಗ್ರಹ ಪ್ರತಿಷ್ಠೆಯಾಗಿ ಆರಾಧನೆಯಲ್ಲಿರುವುದು ಸಂಪ್ರದಾಯವಾಗಿ ಬಂದಿದೆ. ದಿವ್ಯಕ್ಷೇತ್ರಗಳಲ್ಲಿ 'ಶಾತ್ತುಮೊರೆ' ಎಂಬ ಪೂಜಾಕ್ರಮದ ಕೊನೆಯ ಅಂಗವಾಗಿ

(28 ನೇ ಪುಟನೋಡಿ)

# ಗೀತೆಯ ಸಾರ

(ಹಿಂದಿನ ಸಂಚಿಕೆಯಿಂದ)

ಇಂದು ನಮ್ಮ ಎದುರಿಗೆ ಶ್ರೀಕೃಷ್ಣನಿಲ್ಲದಿರಬಹುದು. ಪಾರ್ಥನ ಸಮಸ್ಯೆಯೂ ನಮ್ಮದಾಗದಿರಬಹುದು.

ಆದರೆ ನಮಗೆ ನಮ್ಮದೇ ಆದ ಸಮಸ್ಯೆಗಳು ಎದುರಾದಾಗ ಸಂದಿಗ್ಧತೆಯ ಸುಳಿಯಲ್ಲಿ ಸಿಲುಕಿದಾಗ, ಕಂಗೆಡುವ ಸ್ಥಿತಿಬಂದಾಗ ಧೃತಿಗೆಡದೆ, ಪಾರ್ಥನಂತೆ ಬರುವ ಎಲ್ಲ ಅಡ್ಡಿ ಆತಂಕಗಳನ್ನೂ ಎದುರಿಸಲು, ಹತ್ತಿಕ್ಕಲು–ಎಲ್ಲ ಕಾಮನೆಗಳನ್ನು ದೂರಮಾಡಿ, ಜೀವದ ಪರಮೋಚ್ಚ ಗುರಿಯನ್ನು ಸಾಧಿಸಲು ಅರ್ಥಪೂರ್ಣವಾದ ಬದುಕನ್ನು ಸಾರ್ಥಕ್ಯಗೊಳಿಸಲು – ಆತ್ಮಸ್ಥೈರ್ಯ–ಮನಸ್ಸಿನ ದೃಢತೆ–ಸ್ಥಿರತೆ ಅತ್ಯಗತ್ಯ.

ನಾಯಮಾತ್ಮಾ ಬಲಹೀನೇ ನಲಭ್ಯಃ
ನಾಯಮಾತ್ಮಾ ಪ್ರವಚನೇ ನ ಲಭ್ಯಃ

ಎನ್ನುತ್ತದೆ ಉಪನಿಷತ್ತು. ಎಂದರೆ-ಬಲಹೀನನಾದವನಿಗೂ, ಕೇವಲ ಪ್ರವಚನಾದಿಗಳಿಗೂ ಆತ್ಮೋನ್ನತಿಯಾಗುವುದಿಲ್ಲ. ಆತ್ಮಬಲವನ್ನು ನಾವು ಸ್ವತಃ ಸಿದ್ಧಿಸಿಕೊಳ್ಳಬೇಕು. ಆತ್ಮಸ್ಥೈರ್ಯವನ್ನೂ ಸಂಪಾದಿಸಬೇಕು.

ತದ್ವಿದ್ಧಿ ಪ್ರಣಿಪಾತೇನ
ಪರಿಪ್ರಶ್ನೇನ ಸೇವಯಾ
ಉಪದೇಕ್ಷ್ಯಂತಿ ತೇ ಜ್ಞಾನಂ
ಜ್ಞಾನಿನಃ ತತ್ತ್ವ ದರ್ಶಿನಃ

ಎನ್ನುತ್ತಾನೆ ಶ್ರೀಕೃಷ್ಣ. ನಮ್ಮ ಬದುಕಿಗೆ ಮಾರ್ಗದರ್ಶಕ ಗುರುವೊಬ್ಬನ ಅಗತ್ಯವಿದೆ. ಅಂತಹ ಶ್ರೇಷ್ಠ ಗುರುವನ್ನು ಆಶ್ರಯಿಸಿ ಪಾರ್ಥನಂತೆ–ನಮ್ಮ ಎಲ್ಲ ಸಂಶಯಗಳನ್ನೂ, ಹೃದಯದೌರ್ಬಲ್ಯವನ್ನೂ ದೂರಮಾಡಿಕೊಂಡು, ಕಲಿಯಾಗಿ ನಿಂತು ಧೀರರಾಗಿ ಜೀವನವನ್ನು ಎದುರಿಸೋಣ. ಶ್ರೀಕೃಷ್ಣನ ಮುಖದಿಂದ–ದಿವ್ಯಸಂದೇಶ ಬಂದಿದೆ. ಅದು ಸಾರ್ವಕಾಲಿಕ ಜೀವನ ಸತ್ಯವನ್ನೂ ಕುರಿತದ್ದು.

ಗೀತೆ ನಮಗೆ ಸದಾ ಎಚ್ಚರಿಕೆಯ ಗಂಟೆಯನ್ನು ಬಾರಿಸುತ್ತಿದೆ. "ಗೀತೆಯು ಭವರೋಗಕ್ಕೆ ದಿವ್ಯವಾದ ಔಷಧ". ಯಾವ ಸಂಶಯಗಳಿಗೂ, ಸಮಸ್ಯೆಗಳಿಗೂ ತಾಕಲಾಟಗಳಿಗೂ ಪ್ರಶ್ನೆಗಳಿಗೂ ಉತ್ತರ ಕೊಡುತ್ತದೆ ಗೀತೆ. ಶ್ರೀಮದಾಚಾರ್ಯರಾದ ಪೂಜ್ಯ ಶಂಕರಭಗವತ್ಪಾದರು ಗೀತೆಯನ್ನು ಕುರಿತು ತಮ್ಮ ಶ್ರೀಗೀತಾಭಾಷ್ಯದಲ್ಲಿ–

"ತದಿದಂ ಗೀತಾಶಾಸ್ತ್ರಂ ಸಮಸ್ತವೇದಾರ್ಥಸಾರಸಂಗ್ರಹಭೂತಂ" ಎನ್ನುತ್ತಾರೆ. ಸಮಸ್ತ ವೇದಾರ್ಥಗಳ ಸಾರವನ್ನೊಳಗೊಂಡ ಈ ಪವಿತ್ರ ಗ್ರಂಥ ಗೀತೆಯನ್ನೂ ಅಧ್ಯಯನ ಮಾಡಿದವರು ಅದನ್ನನುಸರಿಸಿದವರು, ತಮ್ಮ ಜೀವನದಲ್ಲಿ ಎಲ್ಲ ವಿಧವಾದ ಸೌಖ್ಯ–ಸಂಪದರಾಗುವರು. ಆಚಾರ್ಯರು ಹೇಳುತ್ತಾರೆ,

"ತದರ್ಥ ವಿಜ್ಞಾನೇ ಸಮಸ್ತ ಪುರುಷಾರ್ಥ ಸಿದ್ಧಿಃ" – ಎಂದು ಗೀತಾತಾತ್ಪರ್ಯವನ್ನು ಮನಸ್ಸಿಗೆ ತಂದುಕೊಂಡು ಅದರಂತೆ ತತ್ತ್ವಧಾರೆಯನ್ನು ನಿಜ ಜೀವನದಲ್ಲಿ ಕೃತಿಗಿಳಿಸಿದರೆ–ಚತುರ್ವಿಧ ಪುರುಷಾರ್ಥಗಳ ಪ್ರಾಪ್ತಿಯಾಗುತ್ತದೆ.

ಮಾನವನಿಗೆ ಇಹಜೀವನಕ್ಕೆ, ಭೌತಿಕ ಬದುಕಿಗೆ ಪೋಷಕವಾದ ಕರ್ಮ, ಭಕ್ತಿ, ಜ್ಞಾನ–ವೈರಾಗ್ಯಗಳ ಆವಶ್ಯಕತೆ ಮತ್ತು ರಾಷ್ಟ್ರೀಯ ಭಾವೈಕ್ಯತೆಯ ಕುರಿತು, ಹಾಗೂ ಸರ್ವಸಮ್ಮತವಾದ ಸಮಾನತೆಯ ತತ್ತ್ವವನ್ನು ಕಲಿಸುತ್ತದೆ ಗೀತೆ ಮತ್ತು ಮುಕ್ತಿಪ್ರದವೂ ಹೌದು.

"ಸಮತ್ವಂ ಯೋಗ ಉಚ್ಯತೇ", "ಸಮಲೋಷ್ಟಾಶ್ಮ ಕಾಂಚನಃ", ಪಂಡಿತಃ ಸಮದರ್ಶಿನಃ–ಎಂಬತ್ತಾದಿ ಗೀತಾವಾಕ್ಯಗಳು ನಮಗೆ ಸಮಾನತೆಯ, ಸಮಷ್ಟಿಯ ಪಾಠವನ್ನು ಕಲಿಸುತ್ತವೆ. ಅದರ ಮಹತ್ತ್ವವನ್ನು ತಿಳಿಸುತ್ತವೆ "ಉದ್ಧರೇದಾತ್ಮನಾತ್ಮಾನಂ ಆತ್ಮಾನಮವಸಾದಯೇತ್" ಎನ್ನುತ್ತಾನೆ ಶ್ರೀಕೃಷ್ಣ. ಎಂದರೆ ತನ್ನನ್ನು ತಾನೇ ಉದ್ಧಾರಮಾಡಿಕೊಳ್ಳಬೇಕು, ಹಾಗೆಂದ ಮಾತ್ರಕ್ಕೆ ತನ್ನ ಉದ್ಧಾರವೇ ಗುರಿಯಲ್ಲ; ಅದು ಕೇವಲ ಸ್ವಾರ್ಥವೆನಿಸುತ್ತದೆ.

ಇಲ್ಲಿ ಶ್ರೀಕೃಷ್ಣ ವ್ಯಷ್ಟಿ ಪ್ರಜ್ಞೆಯಿಂದ ಸಮಷ್ಟಿ ಪ್ರಜ್ಞೆಯತ್ತ ನಮ್ಮ ಅಂದರೆ ಸಮಾಜದ ಗಮನವನ್ನು ಸೆಳೆದಿದ್ದಾನೆ. ವ್ಯಕ್ತಿ ಸಮಾಜಕ್ಕಾಗಿ ಹೊರತು ಸಮಾಜ ವ್ಯಕ್ತಿಗಾಗಿಲ್ಲ ಎನ್ನುವ ಮುಖ್ಯತತ್ತ್ವ ಇಲ್ಲಿ ಪ್ರತಿಪಾದಿತವಾಗಿದೆ.

"ಸಮಷ್ಟಿ ಪ್ರಜ್ಞೆ ಮತ್ತು ವ್ಯಷ್ಟಿ ಪ್ರಜ್ಞೆ" ಎಂದರೇನು? ಎಂಬ ಪ್ರಶ್ನೆಗೆ ಇಲ್ಲಿ ಉತ್ತರವಿದೆ. ಇಲಿಯೊಂದು ಗಿಡುಗನ ಬಾಯಿಗೆ ತುತ್ತಾಗುವುದರಲ್ಲಿತ್ತು. ಇದನ್ನು ಕಂಡ ಪಾರಿವಾಳವೊಂದು, ಇಲಿಗೆ ತನ್ನ ರೆಕ್ಕೆಯಡಿಯಲ್ಲಿ ಆಶ್ರಯಕೊಟ್ಟು ಇಲಿಯನ್ನು ಅಪಾಯದಿಂದ ಪಾರುಮಾಡಿತು.



ಸಂತ ಹರಿಹರಾನಂದ ಸರಸ್ವತೀ

ಇದು ಸಮಷ್ಟಿ ಪ್ರಜ್ಞೆ. ತನ್ನಂತೆ ಇತರರೂ ಬದುಕಲೆಂಬ ದೂರದೃಷ್ಟಿ. ಆದರೆ ತನ್ನನ್ನು ರಕ್ಷಿಸಿದ ಪಾರಿವಾಳದ ಉಪಕಾರವನ್ನೂ ಮರೆತ ಇಲಿ ತನ್ನ ಪ್ರವೃತ್ತಿಯಿಂದ ಅದರ ರೆಕ್ಕೆಯನ್ನೇ ಕಡಿದು ಹಾಕಿತು. ಇದು ವ್ಯಷ್ಟಿ ಪ್ರಜ್ಞೆ, ತಾನು ಬದುಕಿದರೆ ಸಾಕೆಂಬ ಪ್ರಜ್ಞೆ – ಸಂಕುಚಿತವಾದ ದೃಷ್ಟಿ. ಇಂತಹವರು ಬದುಕಿ ಬದುಕಿಸುವ ಕಲೆಯ ಪರಿಚಯದಿಂದ ದೂರವೇ ಉಳಿದವರು.

ಇದು ಜೀವನವಲ್ಲ. ಇಲ್ಲಿ ಶ್ರೀಕೃಷ್ಣ ಪಾರ್ಥನಿಗೆ ನಿಜವಾದ "ಜೀವನಯಜ್ಞದ" ಪರಿಚಯ ಮಾಡಿಕೊಡುತ್ತಿದ್ದಾನೆ. ಸಮಷ್ಟಿ ಪ್ರಜ್ಞೆಯೇ ಯಜ್ಞ ದೃಷ್ಟಿ. ಜೀವನದೃಷ್ಟಿ ವೈಯಕ್ತಿಕವಾಗಿ, ವ್ಯಕ್ತಿಗೆ ತನ್ನ ಬದುಕು ಎಷ್ಟು ಮುಖ್ಯವೋ ಸಮಾಜದ ಬದುಕೂ ಅಷ್ಟೇ ಮುಖ್ಯ ಎನ್ನುವ ಯಜ್ಞದೃಷ್ಟಿ ಬೆಳೆಯಬೇಕು. "ತಾನೂ ಬದುಕಿ – ಇತರರನ್ನೂ ಬದುಕಿಸುವ (ಕಲೆಯ) ಜೀವನ ಕಲೆಯ ಪರಿಚಯಾತ್ಮಕ ವಿಮರ್ಶೆಯೇ ಗೀತ"

ಪಾರ್ಥನಿಗೆ ಹೇಗೆ–ದೇಹಭಾವನೆಯುಂಟಾಗಿ, ಆತ್ಮಾನಾತ್ಮ ವಿವೇಚನೆಯನ್ನು ಕಳೆದು ಕೊಳ್ಳುವಂತಾಯಿತೋ, ಹಾಗೆಯೇ ನಮಗೂ ಪ್ರಸ್ತುತ ಸಮಾಜದಲ್ಲಿ. ವಿವೇಕವನ್ನೂ ಕಳೆದುಕೊಂಡು ದಾರಿಕಾಣದೇ (ಪರಿತಾಪಿಸುತ್ತಿದ್ದೇವೆ) ಪರಿತಪಿಸುವಂತಾಗಿ ಕಂಗಲಾಗಿ ದಿಕ್ಕು ತೋರದೆ (ದಾರಿಗ್ಗಾಣದೇ) ವೈಯಕ್ತಿಕ ಹಾಗೂ ರಾಷ್ಟ್ರೀಯ ಸಮಸ್ಯೆಗಳ ಸುಳಿಯಲ್ಲಿ, ನೆಲೆಯಲ್ಲಿ ಸಿಲುಕಿದ್ದೇವೆನ್ನುವುದು ವಾಸ್ತವಿಕ ಸತ್ಯ

ಲೌಕಿಕ ಬದುಕಿಗೆ ಆಧ್ಯಾತ್ಮದ ಲೇಪನವಾಗಬೇಕು. ಆಗಲೇ ಜೀವನ ಪೂರ್ಣವಾಗುತ್ತದೆ.

ಹೊಸ ಚಿಗುರು ಹಳೆ ಬೇರು ಕೂಡಿರಲು
ಮರಸೊಬಗು ಹೊಸ ಯುಕ್ತಿ ಹಳೆತತ್ತ್ವ
ದೊಡಗೂಡೆ ಧರ್ಮ ಋಷಿವಾಕ್ಯದೊಡನೆ
ವಿಜ್ಞಾನ ಕಲೆ ಮೇಳವಿಸೆ ಜಸವು ಜನ ಜೀವನಕೆ
ಮಂಕುತಿಮ್ಮ

ಎಂದಿದ್ದಾರೆ, ದಿವಂಗತ ಸ್ವರ್ಗೀಯ ಡಾ॥ ಡಿ. ವಿ. ಗುಂಡಪ್ಪನವರು ತಮ್ಮ ಕೃತಿಗಳಲ್ಲೊಂದಾದ ಮಂಕುತಿಮ್ಮನಕಗ್ಗದಲ್ಲಿ "ಧರ್ಮದ ಸೋಂಕಿಲ್ಲದ ವಿಜ್ಞಾನ–ವಿಜ್ಞಾನವೇ ಅಲ್ಲ "ಜ್ಞಾನಂ ವಿಜ್ಞಾನ ಸಹಿತಂ" -ವಿಜ್ಞಾನಸಹಿತವಾದ ಜ್ಞಾನವೇ–ಜೀವನದ ಪರಮೋಚ್ಚ ದರ್ಶನ ಮಾಡಿಸುವ ದಾರಿದೀಪ – ಜೀವನ ದೀವಿಗೆ. "ವಿಜ್ಞಾನವೆಂದರೆ ವಿಮರ್ಶಾಜ್ಞಾನ". ಜೀವನ ದರ್ಶನ ಸ್ವಾನುಭವದಿಂದಾಗಬೇಕು.

ಪುಸ್ತಕದಿ ದೊರೆತರಿವು ಮಸ್ತಕದಿ ತಳೆದಮಣಿ
ಚಿತ್ತದೊಳು ಬೆಳೆದರಿವು ತರುತಳೆದ ಪುಷ್ಪ
ವಸ್ತು ಸಾಕ್ಷಾತ್ಕಾರವಂತರೀಕ್ಷಣೆಯಿಂದ
ಶಾಸ್ತ್ರತನದಿಂದಲ್ಲ ಮಂಕುತಿಮ್ಮ

–"ಜಾನ ಮತ್ತು ವಿಜ್ಞಾನಗಳ" ಸಹಯೋಗದಿಂದ ನಮ್ಮ ಒಳಗಣ್ಣು ತೆರೆಸಿಕೊಂಡು ವಿಶಾಲ ವಿಶ್ವವನ್ನು ನೋಡಿದಾಗ, ನಮ್ಮ ನೈಜಪ್ರಜ್ಞೆ ಜಾಗೃತವಾಗುತ್ತದೆ.

ಗಂಗಾ–ಯಮುನ – ಸರಸ್ವತಿಯರ ತ್ರಿವೇಣಿ ಸಂಗಮದಂತೆ–ಕರ್ಮ–ಭಕ್ತಿ–ಜ್ಞಾನಗಳ ತ್ರಿವೇಣಿ ಸಂಗಮವಾದ ಗೀತೆಯು–"ಸರ್ವ ದುಃಖನಿವಾರಿಣಿಯೂ–ಭವತಾರಣಿಯೂ" ಹೌದು. "ಗೀತಾ ಗಂಗೋದಕಂ ಪೀತ್ವಾ ಪುನರ್ಜನ್ಮ ನ ವಿದ್ಯತೇ". ಗೀತಾಗಂಗೆಯನ್ನು ಪಾನಮಾಡಿದವರಿಗೆ ಪುನರಪಿ ಜನ್ಮವಿಲ್ಲ ಎಂದು ಶ್ರುತಿಸಾರುತ್ತಿದೆ.

ಸಕೃತಾಂಭಸಿ ಸ್ನಾನಂ
ಸಂಸಾರ ಮಲ ನಾಶನಂ

ಎಂದರೆ "ಗೀತಾಸಾಗರದಲ್ಲಿ" ಮಿಂದವರು ಎಲ್ಲ ಕಲ್ಮಷಗಳಿಂದಲೂ ದೂರವಾಗಿ ಸಂಸಾರ ಬಂಧನದಿಂದ ಮುಕ್ತರಾಗುತ್ತಾರೆ.

ಶ್ರೀಮದಾಚಾರ್ಯರು,

ಭಗವದ್ಗೀತಾ ಕಿಂ ಚ ದಧೀತಾ
ಗಂಗಾ ಜಲಲವ ಕಣಿಕಾ ಪೀತಾ
ಸಕೃದಪಿಯೇನ ಮುರಾರಿ ಸಮರ್ಚಾ
ಕ್ರಿಯತೇ ತಸ್ಯ ಯಮೇನ ನ ಚರ್ಚಾ

–ಎನ್ನುತ್ತಾ,

ಗೀತೆಯ ಅಧ್ಯಯನದ ಆವಶ್ಯಕತೆಯನ್ನು ಕುರಿತು ಇಲ್ಲಿ ಸ್ಪಷ್ಟಪಡಿಸುತ್ತಾರೆ.

ಹೀಗೆ ಗೀತೆಯು 'ಸತ್ಯದ' ಸಂಪೂರ್ಣ ಸಾಕ್ಷಾತ್ಕಾರ ಮಾಡಿಸುವಂತಹ ಮತ್ತು ಮಾನವನನ್ನು ಪರಿಪೂರ್ಣತೆಯತ್ತ ಕೊಂಡೊಯ್ಯುವಂತಹ "ಮಾರ್ಗದರ್ಶಕ ಕೈಪಿಡಿ, ಮಹೋನ್ನತ ಕೃತಿ"

ಗೀತೆಯನ್ನು ಹೇಳುವವ ಕೃಷ್ಣ. ಕೇಳಿದ ಅರ್ಜುನ ಮತ್ತು ಬರೆದ ಭಗವಾನ್ ವ್ಯಾಸರೂ ಸಹ ಕೃಷ್ಣರೇ ಆಗಿದ್ದಾರೆ. ಆ ಗೀತಾಮೃತವನ್ನು, ಜನಕೋಟಿಗೆ ಧಾರೆಯೆರೆಯುವಲ್ಲಿ ಸಫಲರಾಗಿದ್ದಾರೆ.

ಇಂತಹ ಗೀತಾ ತಾತ್ಪರ್ಯವನ್ನು ಚಿತ್ತೈಕಾಗ್ರತೆಯಿಂದ – ನಾವೂ ಅಧ್ಯಯನಮಾಡಿ ಯಜ್ಞದೃಷ್ಟಿಯನ್ನೂ, ಸಮಷ್ಟಿ ಪ್ರಜ್ಞೆಯನ್ನೂ ಬೆಳೆಸಿಕೊಂಡು ಧನ್ಯರಾಗೋಣ, ಮಾನ್ಯರಾಗೋಣ, ಸನ್ಮಾನ್ಯರಾಗಿ ಜನ್ಮದ ಸಾರ್ಥಕತೆಯನ್ನು ಹೊಂದೋಣ.

ಶ್ರೀ ಗೀತಾಚಾರ್ಯನ ಕೃಪೆ ನಮ್ಮ ಎಲ್ಲರ ಮೇಲೆಯೂ ಇರಲಿ ಎಂದು ಭಕ್ತಿಯಿಂದ ಪ್ರಣಾಮಗಳೊಂದಿಗೆ ಬೇಡಿ ಈ ಲೇಖನವನ್ನು ಮುಗಿಸುತ್ತೇವೆ.

"ಓಂ ಜಯ ಭಗವದ್ಗೀತೆ"

# ಕನಕದಾಸ ಪ್ರಾಶಸ್ತ್ಯ

(ಹಿಂದಿನ ಸಂಚಿಕೆಯಿಂದ)

## ನೀತಿ ನಿಷ್ಠೆ :

ಬಾಳು ಬಂಗಾರವಾಗುವುದಕ್ಕೆ ಜನರು ಅವಶ್ಯವಾಗಿ ಅನುಸರಿಸಬೇಕಾದ ನೀತಿ ನಿಷ್ಠೆಗಳ ಬಗ್ಗೆ ಕನಕದಾಸನು ಹಲವಾರು ಪದಗಳು ಬರೆದಿದ್ದಾನೆ. ಪಾಪಕಾರ್ಯ, ವೃಥಾಕಾಲಹರಣ, ಅಜ್ಞಾನ, ಕುಟಿಲ ಪ್ರವರ್ತನೆ – ಇವುಗಳಿಂದ ಜನರನ್ನು ಮುಕ್ತಗೊಳಿಸಿ ಸನ್ಮಾರ್ಗದ ಕಡೆಗೆ ನಡೆಸುವ ತನ್ನ ಧ್ಯೇಯವನ್ನು ವ್ಯಕ್ತಪಡಿಸಿದ್ದಾನೆ. "ಛೀ ನಿನ್ನ ಮೋರೆ ಮೇಲೆ ಕೊಣ್ಣ" ಎಂಬ ಹಾಡಿನಲ್ಲಿ ಕಾಶಿನ ಮತ್ತಿನಲ್ಲಿ ಪರಕಾಂತೆಯರ ಬಯಸುವುದು, ಲೆತ್ತ, ಪಗಡೆ, ಚದುರಂಗ ಕ್ರೀಡೆಗಳಲ್ಲಿ ಆಯುಷ್ಯ ವ್ಯರ್ಥಮಾಡುವುದು, ಪ್ರಯಾಸಪಟ್ಟು ದ್ರವ್ಯಗಳಿಸುವುದು, ಹೆಂಡಿರು ಮಕ್ಕಳು ಅತ್ತರೆಂದು ಭ್ರಮಿಸುವುದು, ಖೋಡಿ ಮಾತುಗಳಿಂದ ಪರರ ಚಿವುಟುವುದು–ಇಂತಹ ಪದ್ಧತಿಗಳನ್ನು ವಿಮರ್ಶಿಸಿದ್ದಾನೆ.

ಆತ್ಮಶುದ್ಧಿಗೆ ಕನಕನು ಅತ್ಯಂತ ಪ್ರಾಮುಖ್ಯ ನೀಡಿದ್ದಾನೆ. ಡಾಂಭಿಕ ಪ್ರವರ್ತನೆಯನ್ನು ನಿರ್ದಾಕ್ಷಿಣ್ಯವಾಗಿ ತೆಗಳಿದ್ದಾನೆ–"ಜಪವ ಮಾಡಿದರೇನು ತಪವ ಮಾಡಿದರೇನು, ಕಪಟಗುಣ ವಿಪರೀತ ಕಲುಷವಿದ್ದವರು"–ಎಂಬ ಹಾಡಿನಲ್ಲಿ ಕಲ್ಮಷಾತ್ಮರು ಅತ್ತಲಿತ್ತಲು ತೊಳಲುವುದು, ವೇದಶಾಸ್ತ್ರಗಳೋದಿ ಬಳಲುವುದು, ತರ್ಕವಾದಗಳು ಮಾಡುವುದು–ಇತ್ಯಾದಿಗಳು ನಿಷ್ಫಲವೆಂದಿದ್ದಾನೆ. "ಸತ್ಯವಂತರ ಸಂಗವಿರಲು ತೀರ್ಥವೇತಕೆ, ನಿತ್ಯ ಜ್ಞಾನಿಯಾದ ಮೇಲೆ ಚಿಂತೆಯಾತಕೆ" ಎಂಬ ಹಾಡಿನಲ್ಲಿ ಸಜ್ಜನರ ಸಂಗ, ಜ್ಞಾನಾರ್ಜನೆ, ಔದಾರ್ಯಾದಿ ಸುಗುಣಗಳ ಪ್ರಯೋಜನ ಹೊಗಳಿ, ನಿರರ್ಥಕ ಜೀವನವನ್ನು ನಿಂದಿಸಿದ್ದಾನೆ.

ಸಮಾಜಕ್ಕೆ ಹಿತಕರವಾಗಿ ಜೀವಿಸುವುದೇ ಉತ್ತಮ ಲಕ್ಷಣವೆಂದು ಕನಕನ ತೀರ್ಮಾನ. "ಕೇಶವನೊಲುಮೆಯು ಆಗುವ ತನಕ ಹರಿದಾಸರೊಳಿರುತಿರು ಹೇ ಮನುಜ" ಎಂಬ ಹಾಡಿನಲ್ಲಿ ಪರವಂಚನೆಯ ಪಾಪ ಕಾಶಿಗೆ ಹೋದರೂ, ಹರಿಭಕ್ತರ ದೂಷಿಸಿದ ಪಾಪ ಕಾಸು ಕೊಟ್ಟರೂ ಹೋಗದೆಂದಿದ್ದಾನೆ. ಪಾಪಾತ್ಮರು ಭಕ್ತರ ವೇಷ ಹಾಕಿದರೂ ಅರ್ತಿಗೊಲಗದೆಂದು ಎಚ್ಚರಿಕೆ ನೀಡಿದ್ದಾನೆ. ಅನ್ಯಾಯ ನುಡಿಯುವುದು, ತಾಯಿತಂದೆಗಳ ನೋಯಿಸುವುದು, ಮಾಯಾವಾದಗಳ ಬೋಧಿಸುವುದು–ಇವುಗಳಿಂದ ನರಕಪ್ರಾಪ್ತಿ ತಪ್ಪದೆಂದಿದ್ದಾನೆ.

ಶ್ರೀ ಜಿ. ಚೆನ್ನಯ್ಯ

ಜ್ಞಾನದಿಂದ ಕೂಡಿದ ಸಾತ್ವಿಕ ಪ್ರವೃತ್ತಿಯೇ ಸದ್ಗತಿ ಪ್ರಾಪ್ತಿಗೆ ಸಾಧನವೆಂದು ಕನಕನ ಸಿದ್ಧಾಂತ ಸುತರಿಂದ ಸುಗತಿ ಉಂಟೆಂಬ ಸಂಪ್ರದಾಯದ ವಿಶ್ವಾಸವನ್ನು ತಿರಸ್ಕರಿಸಿದ್ದಾನೆ "ಮಗನಿಂದ ಗತಿಯುಂಟೆ, ನಿಗಮಾರ್ಥ ತತ್ವವಿಚಾರದಿಂದಲ್ಲದೆ" ಎಂಬ ಹಾಡಿನಲ್ಲಿ ವೇದಾರ್ಥವಿಚಾರ,



# ತಿರುಮಲೆ ತಿರುಪತಿ ದೇವಸ್ಥಾನಗಳು

# ಶ್ರೀವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಅನ್ನದಾನ ಮಾಡುವುದಕ್ಕಿಂತ ಮಿಗಿಲಾದ ಪವಿತ್ರ ದಾನ ಮತ್ತೊಂದಿಲ್ಲ; ಅದರಲ್ಲೂ ಶ್ರೀ ವೆಂಕಟೇಶ್ವರಸ್ವಾಮಿಯ ಆವಾಸವಾದ ತಿರುಮಲೆಯಲ್ಲಿ ಯಾತ್ರಿಕರಿಗೆ ಅನ್ನದಾನ ಮಾಡುವುದು ಮತ್ತೂ ಪುಣ್ಯಕರವಾದದ್ದು. ತಿ ತಿ. ದೇವಸ್ಥಾನಗಳು ತಿರುಮಲೆಯಲ್ಲಿ ಯಾತ್ರಿಕ ಭಕ್ತರಿಗೆ ಉಚಿತ ಭೋಜನ ನೀಡುವ 'ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ' ಯನ್ನು ಆಚರಣೆಗೆ ತಂದಿದೆ.

## ಯೋಜನೆಯ ಕಾರ್ಯರೂಪ :

* ಯಾರಾದರೂ 5 ಲಕ್ಷ ರೂಗಳು ಅಥವಾ ಅದರ ಗುಣಕಗಳನ್ನು ದತ್ತಿ ನೀಡಬಹುದು ತಿ ತಿ. ದೇವಸ್ಥಾನಗಳು ಈ ದತ್ತಿಗೆ ಸಮನಾದ ಧನವನ್ನು ಸೇರಿಸಿ, ಒಟ್ಟು ಮೊತ್ತದ ಮೇಲಣ ವಾರ್ಷಿಕ ಬಡ್ಡಿಯಿಂದ ಯಾತ್ರಿಕರಿಗೆ ಉಚಿತ ಭೋಜನ ವ್ಯವಸ್ಥೆ ಮಾಡುತ್ತದೆ.

* ಒಂದು ಕುಟುಂಬದ ಐದು ಮಂದಿ ಅಥವಾ ಎರಡು ಸಂಸ್ಥೆಗಳೂ ಸೇರಿ ದತ್ತಿಯ ಹಣವನ್ನು ನೀಡಬಹುದು.

* ದತ್ತಿಯನ್ನು ವ್ಯಕ್ತಿ, ಸಂಸ್ಥೆ, ಸಂಘಗಳು ನೀಡಬಹುದು.

* ಊಟದ ಕೋಣೆಯಲ್ಲಿ ದಾನಿಗಳ ಹೆಸರನ್ನು ಪ್ರಮುಖವಾಗಿರುವಂತೆ ಬರೆದಿಡಲಾಗುವುದು.

## ದಾನಿಗಳಿಗೆ ದೊರೆಯುವ ಸೌಲಭ್ಯಗಳು :

* ವರ್ಷಕ್ಕೊಮ್ಮೆ ಮೂರುದಿನಗಳ ಕಾಲ ತಿರುಮಲೆಯಲ್ಲಿ ದಾನಿಯ ಹಾಗೂ ಅವರ ಕುಟುಂಬದವರಿಗೆ ಉಚಿತ ವಸತಿ, ಹಾಗೂ ವಿರಾಮದ ವೇಳೆಯಲ್ಲಿ ದರ್ಶನ ಆರತಿಯನ್ನು ಒದಗಿಸಲಾಗುವುದು.

* ದಾನಿಗಳ ಈ ದಾನಕ್ಕೆ 80 (G) ಕಲಮಿನಂತೆ ಆದಾಯಕರ ಮಾಫಿ ಉಂಟು.

* ದಾನಿಗಳನ್ನು ಈ ಯೋಜನೆಯ ಕಾರ್ಯಾಚರಣೆಯ ಉಸ್ತುವಾರಿ ನೋಡಲು ಸಲಹಾಸಮಿತಿ ಸದಸ್ಯರನ್ನಾಗಿ ಮಾಡಿಕೊಳ್ಳಲಾಗುವುದು.

* ಈವರೆಗೆ ದತ್ತಿನೀಡಿದವರ ವಿವರಗಳು ಈ ರೀತಿ ಇವೆ

| | | |
|---|---|---|
| 1. | ಶ್ರೀ ಎಲ್. ವಿ. ರಾಮಯ್ಯ, ಮದ್ರಾಸ್ | ರೂ 10 ಲಕ್ಷ |
| 2. | ಶ್ರೀ ಮಾನಸಿಂಗ್ ಕಾ, ಬೊಂಬಾಯಿ | ರೂ 20 ಲಕ್ಷ |
| 3. | ಶ್ರೀ ಆರ್. ಪಿ. ಗೋಯಂಕ, ಕಲ್ಕತ್ತ | ರೂ 10 ಲಕ್ಷ |
| 4. | ಶ್ರೀ ಈಶ್ವರಪ್ರಸಾದ ಪೋದ್ದಾರ್, ಕಲ್ಕತ್ತ | ರೂ 10 ಲಕ್ಷ |
| 5. | ಶ್ರೀ ಧೀರೂಭಾಯಿ ಅಂಬಾನಿ (ರಿಲಯನ್ಸ್ ಟೆಕ್ಸ್‌ಟೈಲ್ಸ್, ಬೊಂಬಾಯಿ) | ರೂ 10 ಲಕ್ಷ |
| 6. | ಶ್ರೀ ಬಿ. ಎಂ. ಖೈತಾನ್, ಕಲ್ಕತ್ತ | ರೂ 10 ಲಕ್ಷ |
| 7. | ಶ್ರೀ ಛಬ್ರಿಯಾ ಚಾರಿಟಿ ಟ್ರಸ್ಟ್, ಬೊಂಬಾಯಿ | ರೂ 10 ಲಕ್ಷ |
| 8. | ಶ್ರೀ ರಾಮನಾಥಗೋಯಂಕಾ, ಮದರಾಸು. | ರೂ 10 ಲಕ್ಷ |
| 9. | ಶ್ರೀ ಹೇಮರಾಜ ಪೋದ್ದಾರ್ ಚಾರಿಟಿ ಟ್ರಸ್ಟ್, ಕಲ್ಕತ್ತ | ರೂ 10 ಲಕ್ಷ |

**ಇದುವರೆಗಿನ ಪ್ರತಿಕ್ರಿಯೆ ಅತ್ಯುತ್ತಮ.**

**ಯಾತ್ರಿಕರಿಗೆ ಹೆಚ್ಚಿನ ಸೇವೆ ಸಲ್ಲಿಸಲು ಉದಾರವಾಗಿ ನೀಡಿರಿ.**

ಮಿಕ್ಕ ವಿವರಗಳಿಗೆ ಕೂಡಲೇ ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇವಸ್ಥಾನಗಳು, ತಿರುಪತಿ–೫೧೭೫೦೧ ಆಂ.ಪ್ರ.**

ನಿರಂತರ ಹರಿಧ್ಯಾನ, ಐಹಿಕವಾಸನಾ ನಿರ್ಮೂಲನೆ ಮಾಡಿದವರಿಗೆ ಮಕ್ಕಳಿದ್ದರೂ ಇಲ್ಲದಿದ್ದರೂ ಒಂದೇ ಎಂದಿದ್ದಾನೆ. ಸತಿಪತಿಯರ ಸಂಬಂಧದಿಂದಲೂ ಪೂರ್ವಗತಿಯಿಂದಲೂ ಆಗುವ ಮಕ್ಕಳಿಗೂ ಸುಗತಿಗೂ ಸಂಬಂಧವಿಲ್ಲ ಎಂದು ತೀರ್ಮಾನಿಸಿದ್ದಾನೆ. ಅಷ್ಟೇ ಅಲ್ಲದೆ– 'ಸತ್ಯನೊಬ್ಬ ಮಗ ಶಾಂತನೊಬ್ಬ ಮಗ ದುರ್ವೃತ್ತಿ ನಿಗ್ರಹ, ಸಮಚಿತ್ತರೀ ನಾಲ್ಕು ಮಕ್ಕಳಿದ್ದ ಮೇಲೆ ಹೆತ್ತರೆ ಫಲವೇನು ಹೆರದಿದ್ದರೇನು?' –ಎಂದು ತನ್ನ ವಿಚಾರ ಸ್ವಾತಂತ್ರ್ಯ ಪ್ರಕಟಿಸಿದ್ದಾನೆ. ಮುಕ್ತಿಸಾಧನೆಯಲ್ಲಿ ತನ್ನ ಉತ್ತಮಗುಣಗಳೇ ಉತ್ತಮ ಪುತ್ರರಾಗಿ ನೆರವು ನೀಡುವುದೆಂಬ ಹೊಸ ಸಿದ್ಧಾಂತ ಪ್ರತಿಪಾದಿತವಾಗಿದೆ ಇದನ್ನು ಅಲ್ಲಗಳೆಯುವಂತಿಲ್ಲ, ಏಕೆಂದರೆ ಗುಣಹೀನರಿಗೆ ಮಕ್ಕಳಿದ್ದ ಮಾತ್ರಕ್ಕೆ ಮುಕ್ತಿ ಪ್ರಾಪ್ತಿ ಆಗಲಾರದಷ್ಟೆ; ಸಾತ್ತ್ವಿಕಗುಣಗಳು ಸ್ವರ್ಗಕ್ಕೂ ತಾಮಸ ಗುಣಗಳು ನರಕಕ್ಕೂ ದಾರಿಗಳೆಂದು ಕನಕನು ಸುವ್ಯಕ್ತಗೊಳಿಸಿದ್ದಾನೆ. ಮಕ್ಕಳಿಲ್ಲದ ಸಂತ ಕನಕನ ಆತ್ಮ ಸಂತೃಪ್ತಿ ಬೇಕು ಬದವಾಗಿ ಆದರ್ಶಪ್ರಾಯವಾಗಿದೆ.

ಶಾಂತಿ ಸ್ನೇಚ್ಛೆಗಳಿಂದ ಕೂಡಿದ ಸಹಜೀವನವೇ ಉಪಾದೇಯವೆಂದು ಕನಕನ ಅಭಿಮತ. "ಅಜ್ಞಾನಿಗಳ ಕೂಡೆ ಅಧಿಕಸ್ನೇಹಕ್ಕಿಂತ, ಸುಜ್ಞಾನಿಗಳ ಕೂಡೆ ಜಗಳವೇ ಲೇಸು" ಎಂಬ ಹಾಡಿನಲ್ಲಿ ಅಜ್ಞಾನಿಗಳ ಗೆಳೆತನಕ್ಕಿಂತಲು ಜ್ಞಾನಿಗಳ ವೈರವೂ, ಅನುಮಾನವುಳ್ಳ ಅರಸನ ಸೇವೆಗಿಂತಲು ಭಿಕ್ಷಾ ಜೀವನವೂ, ಹಂಗಿನ ಕೂಳಿಗಿಂತಲು ಜಲಪಾನವೂ, ಹಾಳು ಹರಟೆಗಿಂತಲು ಹರಿದಾಸರೊಂದಿಗೆ ಸಂಭಾಷಣವೂ, ಬಂಧುಗಳೊಡನೆ ಬಡಿದಾಟಕ್ಕಿಂತಲೂ ಅಡವಿಯಲ್ಲಿ ಅಜ್ಞಾತವಾಸವೂ ಅಸೂಯಾಗ್ರಸ್ತರ ನಡುವೆ ಬದುಕುವುದಕ್ಕಿಂತಲು ಹಾಳುಗುಡಿಯ ವಾಸವೂ ಶ್ರೇಷ್ಠವೆಂದು ಸಾರ್ವಜನೀನ ಸಂದೇಶ ನೀಡಿದ್ದಾನೆ. ವಿರಕ್ತನಾದ ಕನಕನು ವಿರಕ್ತರಿಗೂ ಸಂಸಾರಿಗಳಿಗೂ ಉಭಯ ತಾರಕವಾದ ನೀತಿನಿಷ್ಠೆಗಳನ್ನು ಮಿತ್ರಸಮ್ಮಿತವಾಗಿ ನಿರ್ದೇಶಿಸಿ ತನ್ನ ಮಾನವತಾದೃಷ್ಟಿಯನ್ನು ಚೆನ್ನಾಗಿ ಪ್ರದರ್ಶಿಸಿದ್ದಾನೆ.

ಪೂರ್ವ ಕರ್ಮಫಲದ ಬಗ್ಗೆ ಕನಕನಿಗೆ ನಂಬಿಕೆ ಹೆಚ್ಚು – "ಆರಿಗಾದರು ಪೂರ್ವ ಕರ್ಮಬಿಡದು" ಎಂಬ ಹಾಡಿನಲ್ಲಿ ತ್ರಿಮೂರ್ತಿಗಳು ಕೂಡ ಕರ್ಮಫಲವನ್ನು ಮೀರಲಾರರೆಂದು ಸಮರ್ಥಿಸಿದ್ದಾನೆ. ಶಿವನು ದಿಗಂಬರನಾಗಿ ತಿರಿದುಂಬುವುದು, ಶ್ರೀಪತಿ ಬಲಿಯಬೇಡುವುದು, ಬ್ರಹ್ಮನಶಿರವೊಂದು ಉರುಳುವುದು, ಸೂರ್ಯಚಂದ್ರ ಹರಿಶ್ಚಂದ್ರ ಸುಯೋಧನ ಪಾಂಡವಾದಿಗಳು ಕರ್ಮಫಲಗಳನ್ನು ಅನುಭವಿಸಿರುವುದು ಉದಾಹರಿಸಿದ್ದಾನೆ. ಬದುಕಿನಲ್ಲಿ ಏನು ಬಂದರೂ ತಾಳ್ಮೆ ವಹಿಸಬೇಕೆಂಬ ಸಂದೇಶವಿಲ್ಲಿ ನೀಡಿದಂತಾಗಿದೆ. ಇದನ್ನೆ ನಳಚರಿತ್ರೆಯಲ್ಲಿಯೂ ಧ್ವನಿಸಿರುವುದು ಸ್ಮರಣೀಯ.

## ಸಮಾಜ ಸಂಸ್ಕರಣೆ:

ಕನಕನಲ್ಲಿ ಸಮಾಜದ ಪರಿಜ್ಞಾನ ಹೇರಳವಾಗಿ ಕಂಡು ಬರುವುದು. ಆವನು ಮಾಂಡಲಿಕನಾಗಿಯೂ, ಹಲವಾರು ತೀರ್ಥಯಾತ್ರೆಗಳು ಮಾಡಿದವನಾಗಿಯೂ ಜನರ ಆಚಾರ ವ್ಯವಹಾರಗಳನ್ನು ಸಮಗ್ರವಾಗಿ ಪರಿಶೀಲಿಸಿದ್ದಾನೆ. ಅಂದಿನ ಸಮಾಜದ ಲೋಪ ದೋಷಗಳ ಬಗ್ಗೆ ಪರಿತಪಿಸಿದ್ದಾನೆ. ಅವುಗಳನ್ನು ಮುಚ್ಚುಮರೆಯಿಲ್ಲದೆ ಬಯಲಿಗೆಳೆದು ಹೀಯಾಳಿಸಿದ್ದಾನೆ. ಅನುಕಂಪದಿಂದ ಅಮೃತೋಪದೇಶವನ್ನೂ ನೀಡಿದ್ದಾನೆ.

ಕನಕನ ಕೀರ್ತನೆಗಳಲ್ಲಿ ಅಂದಿನ ಸಮಾಜ ನೈತಿಕವಾಗಿಯೂ ಧಾರ್ಮಿಕವಾಗಿಯೂ ಪತನೋನ್ಮುಖವಾದಂತೆ ಚಿತ್ರಿತವಾಗಿದೆ. "ಕಲಿಯುಗದ ಮಹಿಮೆಯನು ಕಂಡಷ್ಟು ಹೇಳುವೆನು" ಎಂಬ ಹಾಡಿನಲ್ಲಿ ಅಂದಿನ ಸಜ್ಜನರ ಅವನತಿ, ದುರ್ಜನರ ಉನ್ನತಿ, ಮಾನಿನಿಯರ ದೀನತೆ, ಮಹನೀಯರ ಬಡತನ, ಅಧಮರ ಮಾನ್ಯತೆ, ದ್ರೋಹಿಗಳ ಸಿರಿತನ, ಸಾಧುಶೀಲದ ಕ್ಷೀಣತೆ, ಪತಿವ್ರತೆಯರ ದುಸ್ಥಿತಿ, ಜಾರಿಣಿಯರ ಸುಸ್ಥಿತಿ, ಹರಿಹರ ಪೂಜೆಗಳಲ್ಲಿ ಅನಾದರ, ಶಕ್ತಿಪೂಜೆಗಳಲ್ಲಿ ಸಮಾದರ, ಡಾಂಭಿಕವಾದ ತೀರ್ಥಯಾತ್ರೆಗಳಲ್ಲಿ ವ್ಯಾಮೋಹ- ಮುಂತಾದವುಗಳವರ್ಣನೆ, ಕಾಲಜ್ಞಾನದ ರೀತಿಯಲ್ಲಿ ಸಾಗಿದ ವಾಸ್ತವಿಕ ಚಿತ್ರಣವೇ. ಅಂದಿನ ಡಂಭಾಚಾರಗಳನ್ನು ಖಂಡಿಸುತ್ತಾ ಕಾಶಿ ಕಂಚಿ ರಾಮೇಶ್ವರ ಮುಂತಾದ ಕ್ಷೇತ್ರಗಳು ಸುತ್ತುವುದೂ, ಗಂಗಾ ಕೃಷ್ಣಾದಿ ನದಿಗಳಲ್ಲಿ ಮುಳುಗಿ ಜಪಹೋಮಾದಿಗಳು ಮಾಡುವುದೂ ನಿಷ್ಫಲವೆಂದಿದ್ದಾನೆ. ತೀರ್ಥವನು ಹಿಡಿದವರೆಲ್ಲ ತಿರುನಾಮಧಾರಿಗಳೂ ಜನ್ಮ ಸಾರ್ಥಕಪಲ್ಲದವರೆಲ್ಲ ಭಾಗವತರೂ ಆಗಲಾರರೆಂದು ಟೀಕಿಸಿದ್ದಾನೆ ಇಂತಹ ಟೀಕೆಗಳು ಸದಾಚಾರಗಳ ಹೆಸರಿನಲ್ಲಿ ಬಾಹ್ಯಾಡಂಬರಗಳು ಪ್ರಬಲವಾದ ಸ್ಥಿತಿಯನ್ನು ತಿಳಿಸುತ್ತವೆ.

ದೇವರು ಮತ್ತು ಧರ್ಮದ ಹೆಸರಿನಲ್ಲಿ ಅಂದು ಪ್ರಬಲವಾಗಿದ್ದ ಅಜ್ಞಾನದಿಂದ ಕೂಡಿದ ದುರಾಚಾರಗಳನ್ನು ಕನಕನು ಖಂಡಿಸಿದಷ್ಟು ತೀವ್ರವಾಗಿ ಮತ್ತೊಬ್ಬ ಕವಿ ಖಂಡಿಸಿಲ್ಲವೇನೋ! ಆಕಾಲದಲ್ಲಿ ಎಲ್ಲಮ್ಮ, ಎಕ್ಕನಾತಿ, ಮಾರಿ, ದುರ್ಗಿ, ಚೌಡಿ, ಮೈಲಾರಿ, ಬೈರೇದೇವರು ಮೊದಲಾದ ಗ್ರಾಮೀಣ ದೇವತಾ ಪೂಜೆಗಳಲ್ಲಿ ನಡೆಯುತ್ತಿದ್ದ ವಿಧಾನಗಳನ್ನು ಕನಕನು ಜುಗುಪ್ಸಾತ್ಮಕವಾಗಿ ಚಿತ್ರಿಸಿದ್ದಾನೆ. ಈ ವಿಷಯವು "ಕಣಿಯ ಹೇಳಬಂದೆ ನಾರಾಯಣನಲ್ಲದಿಲ್ಲವೆಂದು", "ದಾನ ಧರ್ಮವ ಮಾಡಿ ಸುಖಿಯಾಗೊ ಮನವೆ", "ದಾನ ಧರ್ಮ ಪರೋಪಕಾರವ ಮಾಡು ದೀನನಾಗಿ ನೀ ಕೆಡಬೇಡವೊ", 'ಗೋವಿಂದ ಗೋವಿಂದ ಎನ್ನಲರಿಯದೆ" ಎಂಬ ಕೀರ್ತನೆಗಳಲ್ಲಿ ತುಂಬಿಕೊಂಡಿರುವುದು. ಅಂದಿನ ಶಕ್ತಿದೇವತೆಗಳಲ್ಲಿ ಗುತ್ತಿ ಎಲ್ಲಮ್ಮನ ಜಾತ್ರೆಗೆ ವಿಶೇಷಪ್ರಚಾರ ಪ್ರಾಧಾನ್ಯಗಳಿದ್ದಂತೆ ಉಲ್ಲೇಖಿಸಲಾಗಿದೆ. ಗ್ರಾಮ್ಯ ದೈವಗಳೆಲ್ಲವು ಕೇವಲ ಕಲ್ಲುಗಳೆಂದು ತೀರ್ಮಾನಿಸಿದ್ದಾನೆ.

ಕ್ಷುದ್ರದೇವತಾ ಪೂಜೆಗಳಲ್ಲಿ ಹೋತ ಕುರಿ ಕೋಣಗಳ ಬಲಿಕೊಡುವುದು, ಹಿಟ್ಟಿನ ದೀಪಗಳ ಹೊರುವುದು, ಚಿಗುರೆಲೆ ಬೇವಿನಸೊಪ್ಪು ನಾರ ಸೀರೆಗಳ ಧರಿಸಿ ಕುಣಿಯುವುದು, ನಾಚಿಕೆ ಬಿಟ್ಟು ಬತ್ತಲೆಯಾಗಿ ತಿರುಗುವುದು, ಕನ್ನೆಯರನ್ನು ಜೋಗಿನಿಯರು (ದೇವದಾಸಿಯರು) ಎಂದು ಘೋಷಿಸಿ ವೇಶ್ಯೆಯರಾಗಿಸಿ ಬಿಡುವುದು, ಮದ್ಯಮಾಂಸಗಳ ಸೇವಿಸುವುದು–ಇವು ನಡೆಯುತ್ತಿದ್ದುದನ್ನು ಕಠಿನ ವಿಮರ್ಶೆಗೆ ಗುರಿಮಾಡಿದ್ದಾನೆ.

ಆ ಜಾತ್ರೆಗಳಲ್ಲಿ ಮೂಢಭಕ್ತರು ಖಂಡವನ್ನು ಕೊಯ್ದು ಕೊಡುವುದು, ಅಗ್ನಿಕುಂಡದಲ್ಲಿ ಹೊಕ್ಕು ಹೊರಡುವುದು, ಚಾವಟಿಯಿಂದ ಹೊಡೆದುಕೊಳ್ಳುವುದು, ಬೆನ್ನಲ್ಲಿ ಶಸ್ತ್ರವನು ಚುಚ್ಚಿಕೊಳ್ಳುವುದು, ಬೆಟ್ಟಕೊಳ್ಳುವುದು, ಸಿಡಿಯು ಕಟ್ಟಿ ತೂಗಿಸಿಕೊಳ್ಳುವುದು, ಕೊರಳಲ್ಲಿ ತೊಗಲ ಬಿಲ್ಲೆಗಳ ಧರಿಸಿ ಆಹಾರವಿಲ್ಲದೆ ಹಗಲಿರುಳು ಕುಸಕೆದರುವುದು, ಹೆಣದಂತೆ ಬಿದ್ದಿರುವುದು – ಇಂಥವುಗಳನ್ನು ಹೆಸರಿಸಿದ್ದಾನೆ. ಗಂಡುಗತ್ತರಿ ಹಾಕಿ ಕೊಳ್ಳುವುದನ್ನೂ ಬೇರೆಡೆ ಉಲ್ಲೇಖಿಸಿದ್ದಾನೆ. ಇಂತಹ ಹುಚ್ಚಾಟಗಳಿಂದ ಕೇಡು ಫಲವೇ ಹೊರತು ಮುಕ್ತಿ ಅಸಾಧ್ಯವೆಂದು ಸಾರಿದ್ದಾನೆ ಅಷ್ಟೇ ಅಲ್ಲದೆ ಆ ಪೂಜೆಗಳಿಂದ ನರಕವು ತಪ್ಪದೆಂದು ಸಾರಿಸಾರಿ ಹೇಳಿದ್ದಾನೆ.

ಬೇದಿಗೊಳುಂಬ ದೈವಗಳ ಪೂಜೆಗಳಿಗಾಗಿ ಹಣ ವ್ಯರ್ಥಮಾಡುವುದಕ್ಕಿಂತಲು ದಾನಧರ್ಮ ಪರೋಪಕಾರಗಳಿಗೆ ಉಪಯೋಗಿಸುವುದು ಪುಣ್ಯದಾಯಕವೆಂದು ಪ್ರಬೋಧಿಸಿದ್ದಾನೆ. ಹರಿನಾಮ ಸ್ಮರಣೆ ಮಾಡುವುದರಿಂದಲು, ವರಪುಣ್ಯಕಥೆಗಳ ಕೇಳುವುದರಿಂದಲು ಮಾತ್ರವೇ ಮೋಕ್ಷವು ಸಿದ್ಧಿಸುವುದೆಂದು ಸಂದೇಶ ನೀಡಿದ್ದಾನೆ. ಭಕ್ತಿಯ ಮುಖವಾಡದಿಂದ ನಡೆಯುತ್ತಿದ್ದ ಅನಾಚಾರಗಳನ್ನು ಕವಿತೆಯ ಮುಖಾಂತರ ಖಂಡಿಸಿರುವುದಲ್ಲದೆ ಕನಕನು ಆ ಜಾತ್ರೆಗಳಿಗೆ ಹೋಗಿ ಜನರ ಅಜ್ಞಾನ ಹೋಗಲಾಡಿಸಲು ಪ್ರಯತ್ನಿಸಿದ್ದಾನೆ. ಅವನು ದಾಸನಾದ ಮೇಲೆ ಬಾಡ ಮಂಡಲಕ್ಕೆ ಹೋಗಿ ತನ್ನ ಸಮಾಜ ಸಂಸ್ಕರಣೆಯ ಆಶಯವನ್ನು ಬಹಳಷ್ಟು ಮಟ್ಟಿಗೆ ಕಾರ್ಯರೂಪಕ್ಕೆ ತಂದನೆಂದು ಇತಿ

ಹಾಸಕರೂ ಹೇಳಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಸಮಕಾಲೀನವಾದ ಎಲ್ಲ ಕಾಯಕಗಳನ್ನೂ ಕನಕನು ಹೆಸರಿಸಿದ್ದಾನೆ. ಆ ಕಾಯಕಗಳೆಲ್ಲವೂ ಅನ್ನವಸ್ತ್ರ ಸಂಪಾದನೆಗೇ ಹೊರತು ಅವುಗಳ ಮೇಲು ಕೀಳುಗಳೇನಿದ್ದರೂ ಮೋಕ್ಷಸಾಧನೆಗೆ ಅವು ಸಮರ್ಥವಲ್ಲ ಎಂದು ತೀರ್ಮಾನಿಸಿದ್ದಾನೆ. "ಎಲ್ಲರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ" ಎಂಬ ಹಾಡಿನಲ್ಲಿ ಅಂದಿನ ಕಾಯಕಗಳ ವಿವರಣೆ ಸೇರಿದೆ. ವೇದಾದಿಗಳ ಅಧ್ಯಯನ, ಆಧ್ಯಾಪನ, ಕಲಿತನ, ದೊರೆತನ, ವ್ಯಾಪಾರಿತನ, ಒಕ್ಕಲುತನ, ಕಳ್ಳತನ, ಸುಳ್ಳತನ, ತಿರುಕತನ ಶ್ರಾವಿಕ ಜೀವನ, ಸನ್ಯಾಸಿ ಜಂಗಮಾದಿ ಬಹು ವೇಷಧಾರಣೆ, ಇಂತಹ ಎಲ್ಲ ವರ್ಣಾಶ್ರಮಗಳ ಕಾಯಕಗಳೂ ಸ್ವಭಾವೋಕ್ತಿ ಸುಂದರವಾಗಿ ವರ್ಣಿತವಾಗಿವೆ. ಮುಕ್ತಿ, ಆನಂದ, ಕಾಯಕಗಳಿಂದಲ್ಲದೆ ಆದಿಕೇಶವನ ಧ್ಯಾನದಿಂದಲೇ ಲಭಿಸುವುದೆಂದು ಘೋಷಿಸಿದ್ದಾನೆ ಇದರಲ್ಲಿ ಯಾರೂ ತಮ್ಮ ಕಾಯಕದಿಂದ ಗರ್ವ ಪಡಬಾರದೆಂಬ ವ್ಯಂಗೋಪದೇಶ ನೀಡಿದ್ದಾನೆ

ಜಾತೀಯತೆಯನ್ನು ಕನಕನು ತೀವ್ರವಾಗಿ ಗರ್ಹಿಸಿದ್ದಾನೆ. ಜನತೆಯ ಸಹಕಾರ ಸಾಮರಸ್ಯಗಳಿಗೆ ಪ್ರತಿಬಂಧಕವಾದ ಕುಲತತ್ತ್ವವನ್ನು ಸಹಿಸಲಿಲ್ಲ. "ಕುಲ ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ ಕುಲದ ನೆಲೆಯನೇನಾದರು ಬಲ್ಲಿರಾ" ಎಂಬ ಹಾಡಿನಲ್ಲಿ ಜೀವಾತ್ಮ ಧರಿಸುವ ಬುದ್ಬುದಪ್ರಾಯವಾದ ಹಲವಾರು ಜನ್ಮಗಳ ಸೂಚನೆ ನೀಡಿ, ಜನರಲ್ಲಿ ಉಚ್ಚ–ನೀಚ ಭೇದಗಳಿಲ್ಲವೆಂದು ಸಾರಿದ್ದಾನೆ. ವಿಶ್ವವೆಲ್ಲವು ವಿಷ್ಣುಮಯವೆಂಬುದನ್ನು ನೆನೆಪು ಮಾಡಿದ್ದಾನೆ "ಯಾತರವನೆಂದುಸಿರಲಿ ಜಗನ್ನಾಥ ಮಾಡಿದನೊಂದು ಶರರೂಪಗೊಂಬೆಯಯ್ಯ" ಎಂಬ ಹಾಡಿನಲ್ಲಿ ಜನರೆಲ್ಲರು ಜನಾರ್ದನನ ಸಂತಾನವೇ ಎಂಬುದನ್ನು ಸೂಚಿಸಿದ್ದಾನೆ. ಅನ್ನೇ ಅಲ್ಲವೆ ಬಂದದ್ದು ಬಚ್ಚಲಗುಣಿ, ತಿಂದದ್ದು ಮೊಲೆ ಮಾಂಸ – ಇತ್ಯಾದಿಯಾಗಿ ತಿಳಿಸಿ ಎಲ್ಲರ ಜನ್ಮಗಳು ಹೇಯವಾದುವೆಂಬುದನ್ನು, ಅವುಗಳಲ್ಲಿ ತರ–ತಮ ಭೇದಕ್ಕೆ ತಾವಿಲ್ಲವೆಂಬುದನ್ನೂ ಮನದಟ್ಟು ಮಾಡಿದ್ದಾನೆ.

ಜನ್ಮದಿಂದ ಯಾದೃಚ್ಛಿಕವಾಗಿ ಬರುವ ಕುಲದಿಂದಲ್ಲದೆ ಸುಗುಣದಿಂದಲೇ ಗೌರವ ಉಂಟಾಗುವುದೆಂದು ಕನಕನ ಮತ. "ಕುಲಕುಲವೆನ್ನುತಿಹರು ಕುಲವಾವುದು ಸತ್ಯ ಸುಖವುಳ್ಳ ಜನರಿಗೆ" ಎಂಬ ಹಾಡಿನಲ್ಲಿ ಕೆಸರಲ್ಲಿ ಹುಟ್ಟಿದ ತಾವರೆ ಕೇಶವನಿಗೆ ಅರ್ಪಿತವಾಗುವುದನ್ನೂ, ಹಸುಗಳ ಮಾಂಸದಲ್ಲಿ ಹುಟ್ಟಿದ ಹಾಲನ್ನು ಮತ್ತು ಮೃಗಗಳ ಮೈಯಲ್ಲಿ ಹುಟ್ಟಿದ ಕಸ್ತೂರಿಯನ್ನು ಭೂಸುರರು ಉಪಯೋಗಿಸುವುದನ್ನೂ ಉದಾಹರಿಸಿ, ಆ ವಸ್ತುಗಳ ಗುಣವೇ ಅದಕ್ಕೆ ಕಾರಣವೆಂಬುದನ್ನು ಸೂಚಿಸಿದ್ದಾನೆ. ಇನ್ನೂ ಮುಂದುವರೆದು ಕುಲವೆಂಬುದು ಕೇವಲ ಕಲ್ಪಿತವೆಂದು ಸ್ಥಾಪಿಸತೊಡಗಿದ್ದಾನೆ 'ನಾರಾಯಣನ್ಯಾತರ ಕುಲದವ? ಅಗಜಾವಲ್ಲಭನ್ಯಾತರವ? ಆತ್ಮ ಯಾವ ಕುಲ? ಜೀವ ಯಾವ ಕುಲ? ತತ್ತ್ವೇಂದ್ರಿಯಗಳ ಕುಲ ಪೇಳಿರಯ್ಯ?' ಎಂದು ನಿರುತ್ತರವಾದ ಪ್ರಶ್ನೆಗಳ ಸುರಿದಿದ್ದಾನೆ. ಕೊನೆಗೆ ಅತ್ಯಾಂತರಾತ್ಮನಾದ ಆದಿಕೇಶವನೊಲಿದ ಮೇಲೆ ಕುಲದ ಪ್ರಸಕ್ತಿಯೇ ಇಲ್ಲವೆಂದು ಹೇಳಿ, ಭಕ್ತಿಯೇ ಶ್ರೇಷ್ಠತೆಗೆ ಕಾರಣವೆಂದು ನಿರ್ಣಯಿಸಿದ್ದಾನೆ.

ಕುಲತತ್ತ್ವವನ್ನು ಕನಕನು ಸಮೂಲವಾಗಿ ಖಂಡಿಸಲು ಪ್ರಯತ್ನಿಸಿರುವಲ್ಲಿ ಅವನು ಮಾಡಿದ ಯಾತ್ರೆ ಮುಂತಾದ ಹಲವಾರು ಸಂದರ್ಭಗಳಲ್ಲಿ ಎದುರಿಸಿದ ಕಹಿಯ ಘಟನೆಗಳು ಪ್ರೇರಕವಾಗಿವೆ. ಎಷ್ಟೋ ಶತಮಾನಗಳಿಂದ ಸಮಾಜವನ್ನು ಅರ್ಬುದ ವ್ಯಾಧಿಯಂತೆ ಪೀಡಿಸುತ್ತಿರುವ ಕುಲದ ಕೊಳೆಯ ತೊಳೆಯಲು ಕನಕನು ಮಾಡಿದ ಪ್ರಯತ್ನ ಪ್ರಶಂಸನೀಯವೇ ಸರಿ

ನಮ್ಮ ಸಮಾಜ ಸಾಮಾನ್ಯ ಜನರಲ್ಲಿ ಮೂಢ ವಿಶ್ವಾಸಗಳೂ, ಅನಾಚಾರಗಳೂ, ಒಡಕು ತೊಡಕುಗಳೂ ಎಂದಿನಿಂದಲೋ ಹೆಚ್ಚಾಗಿ ವ್ಯಾಪಿಸಿರುವುದು ನಿರ್ವಿವಾದ. ಆದರೆ ಈ ಸ್ಥಿತಿ 16 ನೇ ಶತಮಾನದ ಉತ್ತರಾರ್ಧದಲ್ಲಿ ಉಲ್ಬಣಾವಸ್ಥೆಗೆ ತಲುಪಿದೆ. ಅಂದಿನ ವಾಸ್ತವಿಕಾಂಶಗಳೇ ಕನಕನ ಹಾಡುಗಳಲ್ಲಿ ವರ್ಣಿತವಾಗಿವೆ. ಆಕಾಲದಲ್ಲಿ ವಿದೇಶೀಯರ ವಿಜೃಂಭಣೆಯಿಂದ ವಿಜಯನಗರ ಸಾಮ್ರಾಜ್ಯ ವೈಭವವೂ, ಅದರ ಜೊತೆಗೆ ಸನಾತನ ಸಂಸ್ಕೃತಿಯ ಮೌಲ್ಯಗಳೂ ಇಳಿಮುಖವಾದುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

## ಕವಿತಾಸ್ವಭಾವ :

ಕನಕದಾಸನು ಮಹಾಕಾವ್ಯಗಳು ಬರೆದವನಲ್ಲ. ಅವನ ಕೀರ್ತನೆಗಳು ಕೂಡ ಪುರಂದರದಾಸನಿಗಿಂತಲು ಕಡಿಮೆಯೇ. ಆದರೂ ಕವಿತಾ ಸ್ವಭಾವವನ್ನು ಹಿಡಿದು ದಾಸ ಪಂಥದವರಲ್ಲಿ ಕನಕನಿಗೆ ಉತ್ತಮ ಸ್ಥಾನವಿರುವುದಾಗಿ ಸಾಹಿತ್ಯ ಚರಿತ್ರಕಾರರು ತೀರ್ಮಾನಿಸಿದ್ದಾರೆ.

ಕಾವ್ಯರಚನೆಯಲ್ಲಿ ಸಲಕ್ಷಣವಾದ ಪಂಡಿತ ಭಾಷೆಯನ್ನು, ಮನಮೋಹಕವಾದ ಹಾಡುಗಬ್ಬದ ಛಂದಶ್ಶಿಲ್ಪವನ್ನು ಬಳಸಿದ್ದಾನೆ. ಹೃದಯಂಗಮವಾದ ಕವಿತಾರೀತಿ ಪ್ರದರ್ಶಿಸಿ ಪ್ರಜಾಭಿಮಾನಕ್ಕೆ ಪಾತ್ರನಾಗಿದ್ದಾನೆ. ಇದಕ್ಕೆ ಅವನ ನಳ ಚರಿತ್ರೆ, ಹರಿಭಕ್ತಿಸಾರವು ನಿದರ್ಶನವಾಗಿವೆ. ಕೀರ್ತನೆಗಳಲ್ಲಿ ಸಾಮಾನ್ಯ ಜನತೆಯ ಜೀವಂತವಾದ ಭಾಷೆಯನ್ನು, ಭಾವಾನುಗುಣವಾದ ಶೈಲಿಗಳನ್ನು, ಗಣಿತಕ್ಕೆ ತಕ್ಕ ಜನಪದ ಗೀತೆಗಳ ಧಾಟಿಗಳನ್ನು ಪ್ರಯೋಗಿಸಿದ್ದಾನೆ. ಪ್ರತಿಭಾನ್ವಿತವಾಗಿ ಭಾವರಾಮಣೀಯಕದಿಂದಲೂ ನಾದ ಮಾಧುರ್ಯದಿಂದಲೂ ಜನರ ಹೃದಯತಂತ್ರಿಗಳನ್ನು ಮಿಡಿದಿದ್ದಾನೆ.

ರಸಪೋಷಣೆಯಲ್ಲಿಯೂ, ಅಲಂಕಾರ ಪ್ರಯೋಗದಲ್ಲಿಯೂ ಕನಕನು ನಿಪುಣನೆನಿಸಿಕೊಂಡಿದ್ದಾನೆ. ಮೋಹನ ತರಂಗಿಣಿಯಲ್ಲಿ ಶೃಂಗಾರವನ್ನು, ನಳಚರಿತ್ರೆಯಲ್ಲಿ ಕರುಣವನ್ನು, ಹರಿಭಕ್ತಿ ಸಾರ ಮತ್ತು ಕೀರ್ತನೆಗಳಲ್ಲಿ ಶಾಂತವನ್ನು ಸೊಗಸಾಗಿ ಪೋಷಿಸಿದ್ದಾನೆ. ಸಂದರ್ಭಕ್ಕೆ ತಕ್ಕಂತೆ ಇತರ ರಸಗಳನ್ನು ಚೆನ್ನಾಗಿ ಪೋಷಿಸಬಲ್ಲನು. ಇದಕ್ಕೆ ಶಕ್ತಿ ದೇವತಾ ಪೂಜೆಗಳ ಚಿತ್ರಣದಲ್ಲಿ ಬೀಭತ್ಸರಸ ಪೋಷಣೆ ಒಂದು ಉದಾಹರಣೆ ಹೇಳಬಹುದು. ವಿಷಯ ಸಂಬೋಧವಾಗುವುದಕ್ಕೆ ತಕ್ಕ ಉಪಮೆಗಳು, ರೂಪಕಗಳು ಪ್ರಯೋಗಿಸಿದ್ದಾನೆ. 'ಗಾಳಿಗೊಡ್ಡಿದ ಸೊಡರು ಈ ಸಂಸಾರ', 'ಪಂಚೇಂದ್ರಿಯಗಳೆಂಬ ಮಂಚಿಗೆಯ ಹಾಕಿರಯ್ಯ, ಚಂಚಲವೆಂಬ ಹಕ್ಕಿಯ ಓಡಿಸಿರಯ್ಯ, ಉಪಯಾಸ್ತಮಾನವೆಂಬ ಎರಡು ಕೊಳಗವ ಮಾಡಿ ಆಯುಷ್ಯದರಾಶಿ ಅಳೆಯಿರಯ್ಯ'–ಇಂತಹ ರೂಪಕಗಳಲ್ಲಿ ಅವನ ಪ್ರತಿಭೆ ನಿರೂಪಿತವಾಗಿದೆ.

ಅನಲ್ಪ ಕಲ್ಪನಾಶಕ್ತಿ ಕನಕನಿಗಿದೆ. ಇದಕ್ಕೆ ರಾಮಧಾನ್ಯ ಚರಿತ್ರೆ ಕಥೆಯ ಸೃಷ್ಟಿ ಒಂದು ಉದಾಹರಣೆ. ಆ ಶಕ್ತಿ ಅವನ ಕೆಲವು ಹಾಡುಗಳಲ್ಲಿ ಗಗನಗಂಗೆಯಂತೆ ಧುಮುಕಿ ಹರಿದಿದೆ. 'ಹಲವು ಜನುಮದಿ ತಾಯಿ ಎನಗಿತ್ತ ಮೊಲೆಹಾಲು ನಲಿದುಂಬಾಗ ನೆಲಕ್ಕೆ ಬಿದ್ದುದು ಕೂಡಿ ಅಳೆಯೆ ಕ್ಷೀರಾಂಬುಧಿಗೆ ಇಮ್ಮಿಗಿಲು' ಇತ್ಯಾದಿಯಾಗಿ ವಿಚಾರಧಾರೆ ಮುಂದುವರಿಸಿ ಒಬ್ಬ ಜೀವಿ ಎಷ್ಟೆಷ್ಟು ಜನ್ಮಗಳ ಹೊಂದಬಹುದೆಂಬುದನ್ನು ಸಮರ್ಪಕವಾಗಿ ತಿಳಿಸಿದ್ದಾನೆ.

ಕವಿತೆಯ ಪರಮ ಪ್ರಯೋಜನಗಳಾದ ಆಹ್ಲಾದ ಮತ್ತು ಉಪದೇಶ–ಇವೆರಡನ್ನೂ ಪಂಡಿತರಿಗೂ ಪಾಮರರಿಗೂ ಯಶಸ್ವಿಯಾಗಿ ಹಂಚಿದ ಕನಕದಾಸನ ವ್ಯಕ್ತಿತ್ವವು ಅಸಾಧಾರಣವಾದುದು ಅವನ ಸಂದೇಶ ಅಮರವಾದುದು. ಅವನು ಹುಟ್ಟು ಕವಿ ಎಂಬುದರಲ್ಲಿ ಸಂದೇಹವಿಲ್ಲ. ಹಿಂದಿಯಲ್ಲಿ ಕಬೀರದಾಸನಂತೆ ಕನ್ನಡದಲ್ಲಿ ಕನಕದಾಸನು ಚಿರಸ್ಮರಣೀಯವಾದ ಸಂತಕವಿ.



ಯುವವಾಣಿ

# ಲೋಕಾನುಭವ ರತ್ನಕೋಶ

ಮಹಾಕವಿಗಳ ಮಾತು ಮಧುರವೂ ಹೌದು, ಮಾರ್ಮಿಕವೂ ಹೌದು, ಅನುಭವದ ಮಾತಾದ್ದರಿಂದ, ಅದು ಮಾರ್ಗದರ್ಶಕವೂ ಹೌದು, ಸಂಸ್ಕೃತದಲ್ಲಿ ಇಂತಹ ಅರ್ಥಪೂರ್ಣವಾದ ಮಾತುಗಳನ್ನು – ಸುಭಾಷಿತವೆಂದು ಕರೆಯುತ್ತಾರೆ. ಗೀರ್ವಾಣವಾಙ್ಮಯದಲ್ಲಿ ಭರ್ತೃಹರಿಯ "ಸುಭಾಷಿತತ್ರಿಶತಿ" ತುಂಬ ಜನಪ್ರಿಯವಾದ ಗ್ರಂಥ. ಭರ್ತೃಹರಿಯ ವಿಚಾರದಲ್ಲಿ ಅನೇಕ ದಂತಕಥೆಗಳಿವೆ. ಈತನು ಒಬ್ಬ ಯೋಗಿಯೆಂದು, ತ್ರಿಶತಿ ವ್ಯಾಖ್ಯಾನಕಾರನಾದ ರಾಮಚಂದ್ರ ಬುಧೇಂದ್ರನ ಅಭಿಪ್ರಾಯ. ಈ ಸುಭಾಷಿತಕಾರನ ಕಾಲನಿರ್ಣಯ ಮಾಡುವುದು ಸುಲಭವಲ್ಲ. ಪಂಡಿತಮಂಡಲಿಯಲ್ಲಿ ಇದರ ಬಗ್ಗೆ ಖಚಿತ ಅಭಿಪ್ರಾಯವಿಲ್ಲ. ವಿಕ್ರಮಾರ್ಕನೆಂಬ ರಾಜನ ಸೋದರನ ಹೆಸರೂ ಭರ್ತೃಹರಿ. ವಾಕ್ಯಪದಿ ಎಂಬ ಗ್ರಂಥ ಹಾಗೂ, ಪಾಣಿನಿ ವ್ಯಾಕರಣಕ್ಕೆ ವಿವರಣೆ ಬರೆದಾತನೂ ಭರ್ತೃಹರಿ. ಇವರಿಬ್ಬರೂ ಭಿನ್ನ ಭಿನ್ನ ವ್ಯಕ್ತಿಗಳೇ ಅಥವ ಒಬ್ಬನೇ ಇರಬಹುದೆ? ಇತ್ಯಾದಿ ಚರ್ಚೆಗಳು ಸಾಕಷ್ಟು ನಡೆದಿವೆ. ತರ್ಕ ಮತ್ತು ಚರ್ಚೆ ಮಾಡಿದಷ್ಟೂ ವಿರಸವಾದೀತೇ ಹೊರತು, ಗ್ರಂಥದ ಸೊಗಸು ಕಂಡು ಬರುವುದಿಲ್ಲ. ರಸಿಕ ದೃಷ್ಟಿಯ ಸಹೃದಯ ವ್ಯಕ್ತಿ ಶ್ಲೋಕಗಳ ಸ್ವಾರಸ್ಯ, ಅದರ ಹಿಂದಿರುವ ಅಪಾರ ಲೋಕಾನುಭವವನ್ನು ಕಾಣುತ್ತಾನೆ ಮತ್ತು ಅದರಿಂದ ಮಾರ್ಗದರ್ಶನ ಪಡೆಯಲೆಳಸುತ್ತಾನೆ. ಅಷ್ಟೆ ಅವನ ಉದ್ದೇಶ, ಕಾವ್ಯದ ಫಲವೇ ಆನಂದ ಪ್ರಾಪ್ತಿ. ವಾಕ್ಯಂ ರಸಾತ್ಮಕಂ ಕಾವ್ಯಂ – ಎಂಬಂತೆ ಸುಭಾಷಿತದ ಶ್ಲೋಕಗಳೆಲ್ಲ ಕಾವ್ಯಗಳೇ ಆಗಿವೆಯೆಂದರೆ ತಪ್ಪಿಲ್ಲ.

ತ್ರಿಶತಿ ರಚಿಸಿದ ಕವಿ ಯಾರೇ ಆಗಿರಲಿ, ಆತನ ವ್ಯಕ್ತಿತ್ವವನ್ನು ಇದಮಿತ್ಥಂ–ಎಂದು ಹೇಳುವಂತಿಲ್ಲ, ಏಕೆಂದರೆ ನೀತಿ–ಶೃಂಗಾರ–ವೈರಾಗ್ಯ ಮೂರನ್ನೂ ಕುರಿತು ಕವಿ ಪ್ರಸ್ತಾಪಿಸಿದ್ದಾನೆ.

ನೀತಿ ಎಲ್ಲಿ–ಶೃಂಗಾರವೆಲ್ಲಿ? ಶೃಂಗಾರಕ್ಕೂ ವೈರಾಗ್ಯಕ್ಕೂ ಸಂಬಂಧವಿರುತ್ತದೆಯೆ? ಎಂದು ಯಾರಾದರೂ ಪ್ರಶ್ನೆ ಮಾಡಬಹುದು. ಆದರೆ ಈ ಮೂರಂಶಗಳೂ ಜೀವನದಲ್ಲಿರುವುದಂತೂ ಸತ್ಯವಷ್ಟೆ!! ಈ ಮೂರಕ್ಕೂ ತನ್ನದೇ ಆದ ಪ್ರತ್ಯೇಕ ಸ್ಥಾನಮಾನಗಳುಂಟಲ್ಲವೇ? ಈ ಮೂರನ್ನೂ ಹೇಗೆ ಸಮನ್ವಯ ಮಾಡಿಕೊಳ್ಳಬೇಕೆಂಬುದೇ ಮಾನವ ಜೀವನದ ರಹಸ್ಯವಿದ್ದರೂ ಆಶ್ಚರ್ಯವಿಲ್ಲ. ಶೃಂಗಾರದ ತೀವ್ರತರ ನಾಗಾಲೋಟಕ್ಕೆ ನೀತಿ ಕಡಿವಾಣವಿರಬಹುದು, ಶೃಂಗಾರದ ಅತಿರೇಕವೇ ವೈರಾಗ್ಯದ ಮೂಲವೆಂದರೂ ಸೋಜಿಗವಿರಲಾರದು.

ಈ ಕಾಲದಲ್ಲಿ ನೀತಿ ಯಾರಿಗೆ ಬೇಕಾಗಿದೆ? ಬಲ್ಲವರಿಗೆ ಅದು ಅಗತ್ಯವಿಲ್ಲ. ಸಾಮಾನ್ಯ ಜನಕ್ಕೆ ಅನಾವಶ್ಯಕ. ಅಧಿಕಾರ ಸ್ಥಾನದಲ್ಲಿರುವವರು, ಸಹಜ ಗರ್ವದಿಂದ ಅದನ್ನು ಪುಷ್ಟೀಕರಿಸುವುದಿಲ್ಲ. ಹಾಗೆಂದು ಅದನ್ನು ತಳ್ಳಿ ಹಾಕುವಂತೆಯೂ ಇಲ್ಲ. ನೀತಿ, ಲೋಕಜೀವನಕ್ಕೆ ಅಗತ್ಯ ಸಾಮಗ್ರಿ. ಸಮಾಜ ಜೀವನದ ಎಲ್ಲ ಹಂತದಲ್ಲೂ ಅದು ಬೇಕು. ಕವಿಗಳು ನೀತಿಯ ಮಾತನ್ನು ಹೇಳಲೇಬೇಕು. ಇಲ್ಲವಾದರೆ ಸದಭಿಪ್ರಾಯಗಳೆಲ್ಲವೂ ಅವನಲ್ಲೇ ಲೀನವಾಗಿಹೋಗುತ್ತವೆ. ಲೋಕ ಅದರಿಂದ ವಂಚಿತವಾಗುತ್ತದೆ. ಜ್ಞಾನಲವದುರ್ವಿದಗ್ಧರೇ ಹೆಚ್ಚಾಗಿರುವ ಈ ಕಾಲದಲ್ಲಿ ಪ್ರತಿನಿವಿಷ್ಟಮೂರ್ಖಜನರ ಬಾಹುಳ್ಯವೇ ಕಾಣುವ ಸನ್ನಿವೇಶದಲ್ಲಿ, ಸಮಾಜಜೀವನ ಗೊಂದಲಮಯವಾಗುವುದರಲ್ಲಿ ಆಶ್ಚರ್ಯವೇನಿಲ್ಲ. ಜ್ಞಾನಲವದುರ್ವಿದಗ್ಧ–ಎಂದರೆ, ಅಲ್ಪಸ್ವಲ್ಪ ತಿಳಿವಳಿಕೆಯಿಂದ ಗರ್ವಪಡುತ್ತ, ತನ್ನನ್ನು ತಾನೆ ಸರ್ವಜ್ಞನೆಂದು ಭಾವಿಸುವಾತ. ಭರ್ತೃಹರಿ ಇಂತಹವರನ್ನು–ಪ್ರತಿನಿವಿಷ್ಟಮೂರ್ಖಜನ ಎಂದು ಕರೆದಿದ್ದಾನೆ. ಎಲ್ಲ ರೋಗರುಜಿನಗಳಿಗೂ ಚಿಕಿತ್ಸೆಯುಂಟು. ಆದರೆ ಮೂರ್ಖತನ ನಿವಾರಣೆಗೆ ಬ್ರಹ್ಮಸೃಷ್ಟಿಯಲ್ಲಿ ಯಾವ ಔಷಧಿಯೂ ಇಲ್ಲವಂತೆ!!

**ವಿದ್ವಾನ್ ಬ. ನ. ಗುಂಡೂರಾವ್**

ಮದಿಸಿದಾನೆಯನ್ನು ಕಮಲದ ದಂಟಿನಿಂದ ಕಟ್ಟಿ ಬಯಸುವಾತ, ಶಿರೀಷ ಕುಸುಮ ದಳದಿಂದ ವಜ್ರವನ್ನು ಕತ್ತರಿಸ ಬಯಸುವಾತ, ತನ್ನ ಕೈಲಿರುವ ಒಂದೇ ಒಂದು ಹನಿ ಜೇನಿನಿಂದ ಸಮುದ್ರಸಾರವನ್ನೇ ಸಿಹಿನೀರಾಗಿ ಪರಿವರ್ತಿಸುತ್ತೇನೆಂಬಾತ; ಮೃದುಮಧುರ ಮಾತಿನಿಂದ ಮೂರ್ಖರನ್ನು ಸಮಾಧಾನಪಡಿಸಲು ಪ್ರಯತ್ನಿಸುವಾತ– ಈ ನಾಲ್ಕುಜನರೂ ಸಮಾನ ರೀತಿಯಲ್ಲಿ ದಡ್ಡರಾಗಿರುತ್ತಾರೆ ಎಂಬ ಕವಿಯ ಮಾತು ತುಂಬ ವ್ಯಂಗ್ಯಪೂರ್ಣವಾಗಿದೆ. ಭರ್ತೃಹರಿ ಸೌಮ್ಯವಾಗಿ, ಸೂಕ್ಷ್ಮವಾಗಿ ಮಾತಾಡುವ ಕಲೆಯಲ್ಲಿ ತುಂಬ ಪರಿಣತ.

ರತ್ನಪರೀಕ್ಷೆಯಲ್ಲಿ ಅನುಭವವಿಲ್ಲದವನು, ಅದನ್ನು ಕೇವಲ ಕಲ್ಲೆಂದೂ, ಅಲ್ಪಬೆಲೆಯ ಪದಾರ್ಥವೆಂದೂ ಭಾವಿಸಿದರೇನು? ರತ್ನದ ಯೋಗ್ಯತೆಗೆ ಧಕ್ಕೆಯಂತೂ ಬರುವುದಿಲ್ಲ. ಈ ಮಾತಿನ ಹಿಂದೆ ಅಡಗಿರುವ ತತ್ತ್ವವೇನು? ವಿದ್ವಜ್ಜನರ ಯೋಗ್ಯತೆಯನ್ನರಿಯದ ಅವಿವೇಕಿಯ ವಿಚಾರ!! ಸೂಕ್ತವಾದ, ಸೂಚ್ಯವಾದ ಮಾತಿನ ಹೊಳವು ಈ ಶತಕತ್ರಯದ ವೈಶಿಷ್ಟ್ಯ. ಉದಾಹರಣೆಗಾಗಿ ಕೆಲವು

ಶ್ಲೋಕಗಳ ಸೊಗಸನ್ನು ಪ್ರಸ್ತಾಪ ಮಾಡುವುದು ಸಂದರ್ಭೋಚಿತವಾಗಿರುತ್ತದೆ.

ಅಂಭೋಜಿನೀವನವಿಹಾರ ವಿಲಾಸಮೇವ
ಹಂಸಸ್ಯ ಹನ್ತಿ ನಿತರಾಂ ಕುಪಿತೋ
ವಿಧಾತಾ
ನ ತ್ವಸ್ಯ ದುಗ್ಧ ಜಲಭೇದ ವಿಧಾ
ಪ್ರಸಿದ್ಧಾಂ
ವೈದಗ್ಧ್ಯಕೀರ್ತಿಂ ಅಪಹರ್ತು
ಮಸೌ ಸಮರ್ಥಃ ||

ಬ್ರಹ್ಮದೇವನಿಗೊಂದು ದಿನ, ತನ್ನ ವಾಹನವಾದ ಹಂಸದಮೇಲೆ ಯಾವುದೋ ಕಾರಣಕ್ಕೆ ಸಿಟ್ಟು ಬಂತು. ಕಿಡಿಕಾರುತ್ತ ಗುಡುಗಿದ– ನಾಳೆಯಿಂದ ನೀನು ಪದ್ಮಸರೋವರದಲ್ಲಿ ಈಜಾಡಕೂಡದು. ಹಂಸ ಹೇಳಿತಂತೆ– ಸಂತೋಷ, ಪ್ರಭು, ತಾವು ಈ ಶಿಕ್ಷೆಕೊಡಲು ಸಮರ್ಥರಿದ್ದೀರಿ, ಆದರೆ ಒಂದು ವಿಚಾರ ನೆನಪಿರಲಿ. ಹಾಲು ನೀರನ್ನು ಬೇರ್ಪಡಿಸುವನನ್ನ ಸಾಮರ್ಥ್ಯವನ್ನು – ಈ ವಿಲಕ್ಷಣ ಯೋಗ್ಯತೆಯನ್ನು ನೀವೇನೂ ಮಾಡಲಾರಿರಿ. ಹಂಸದ ಮಾತು ಕೇಳಿ ಬ್ರಹ್ಮನ ಸ್ಥಿತಿ ಏನಾಗಿರಬೇಕು? ಸಹಜಸಾಮರ್ಥ್ಯವನ್ನಾರೂ ಏನೂ ಮಾಡಲಾರರು–ಪ್ರತಿಭೆಗೆ– ಎಂದೂ ಚ್ಯುತಿ ಬರಲಾರದು.

ಒಂದೇ ಕಾರ್ಯ, ಒಬ್ಬೊಬ್ಬರಿಗೊಂದೊಂದು ರೀತಿಯಲ್ಲಿ ಫಲವನ್ನು ಕೊಡುತ್ತದೆ. ದೀಪ, ಕಣ್ಣು ಬೇನೆಯುಳ್ಳವನಿಗೆ ಬಾಧೆಯನ್ನು ಕೊಡುವುದು ಸಹಜ. ಅದೇ ದೀಪ ಆರೋಗ್ಯವಂತನಿಗೆ ಸಹಾಯಕ ಸಾಮಗ್ರಿ, ಹುಟ್ಟು ಕುರುಡನಿಗೆ ಕೆಲಸಕ್ಕೆ ಬಾರದ ವಸ್ತು. ಪಾತ್ರ ಭೇದದಿಂದ ಫಲಭೇದವಿರಬಹುದೇ? ಸಾಮಾನ್ಯ ಜನ ಮಾಡುವಕಾರ್ಯ, ಜ್ಞಾನಿ ಮಾಡುವ ಕಾರ್ಯ, ಬೇರೆಬೇರೆ ಅಲ್ಲ, ಆದರೆ ಮಾಡುವ ವಿಧಾನದಲ್ಲಿ ವ್ಯತ್ಯಾಸವಿದೆ. ಆದರಿಂದ ಫಲದಲ್ಲೂ ಅಂತರವಿದೆ.

ಜ್ಞಾನಿಯು ಮಾನಾಪಮಾನವನ್ನೂ, ನಿಂದಾಸ್ತುತಿಯನ್ನು ಸಮಾನಬುದ್ಧಿಯಿಂದ –ಕ್ಷಮಾಗುಣದಿಂದ ಸಹಿಸಿಕೊಳ್ಳುತ್ತಾನೆ. ಇಬ್ಬರೂ ಸಂಸಾರವನ್ನು ತ್ಯಜಿಸುತ್ತಾರೆ, ಒಬ್ಬನು ಪರಮಾನಂದದಿಂದ ತ್ಯಜಿಸಿದರೆ ಇನ್ನೊಬ್ಬ ವ್ಯಥೆಪಟ್ಟು ಬೇಸತ್ತು–ಜಿಗುಪ್ಸೆಯಿಂದ ತ್ಯಜಿಸುತ್ತಾನೆ. ಮಳೆ–ಗಾಳಿ–ಚಳಿ ಬಿಸಿಲುಗಳನ್ನು ಜ್ಞಾನಿ ಸಹಿಸಿಕೊಳ್ಳುತ್ತಾನೆ ತಪಸ್ಸೆಂದು ಭಾವಿಸಿ, ಸಾಮಾನ್ಯ ಮಾನವನೂ ಸಹಿಸಿಕೊಳ್ಳುತ್ತಾನೆ-ಗತ್ಯಂತರವಿಲ್ಲದೆ. ಯೋಗಿ ಹಗಲು ರಾತ್ರಿ ಧ್ಯಾನಿಸುತ್ತಾನೆ – ಪರಮಾತ್ಮವನ್ನು, ಚಿನ್ತನ ಮಾಡುತ್ತಾನೆ ಪರಮಾರ್ಥವನ್ನು ಕುರಿತು. ಇನ್ನೊಬ್ಬನೂ ಧ್ಯಾನಿಸುತ್ತಾನೆ ಧನವನ್ನು!! ಚಿನ್ತನ ಮಾಡುತ್ತಾನೆ–ಸ್ವಾರ್ಥವನ್ನು!! ಆದ್ದರಿಂದಲೇ ಅವರು ಹೊಂದುವ ಫಲವೂ ಬೇರೆ ಬೇರೆ ರೀತಿಯಲ್ಲಿರುತ್ತದೆ.

ಆಶಾನಾಮನದೀ ಮನೋರಥಜಲಾ
ತೃಷ್ಣಾತರಂಗಾಕುಲಾ
ರಾಗ ಗ್ರಾಹವತೀ ವಿತರ್ಕವಿಹಗಾಃ
ಧೈರ್ಯದ್ರುಮಧ್ವಂಸಿನೀ |
ಮೋಹಾವರ್ತ ಸುದುಸ್ತರಾತಿಗಹನಾ
ಪ್ರೋತ್ತುಂಗ ಚಿಂತಾತಟೀ
ತಸ್ಯಾಃ ಪಾರಗತಾವಿಶುದ್ಧಮನಸೋ
ನಂದನ್ತಿಯೋಗೀಶ್ವರಾಃ ||

ಎಂದೂ ಮುಗಿಯದ ಬಗೆಬಗೆಯ ಕೋರಿಕೆಗಳೇ ನೀರು. ಅಭಿಲಾಷೆಗಳೇ ಅಲೆಗಳು. ಅನುರಾಗವೇ ಮೊಸಳೆ. ಸಂದೇಹಗಳೇ ಪಕ್ಷಿಗಳು. ಅಜ್ಞಾನವೇ ಸುಳಿ, ತುದಿನೊಡಲಿಲ್ಲದ ಚಿಂತೆಗಳೇ ತಲುಪಲಾಗದ ದಡಗಳು. ಈ ವಿಚಿತ್ರಪ್ರವಾಹ ಧೈರ್ಯವೆಂಬ ವೃಕ್ಷವನ್ನುರುಳಿಸಿ ಹಾಕುತ್ತದೆ. ಆದರೆ ಯೋಗಿಗಳು ಈ ಭಯಂಕರ ನದಿಯನ್ನು ಎಚ್ಚರಿಕೆಯಿಂದ ದಾಟಿ ಹೋಗುತ್ತಾರೆ. ಅವರಿಗೆ ಆ ಪಡದಲ್ಲಿರುವ ಹಿತಕರವಾದ ವಾತಾವರಣ ಪಡೆಯುವುದೇ ಚೆನ್ನ. ಕೆಲವರಿಗೆ ಈಜುವ ಕ್ರಿಯೆಯೇ ಹಿತ. ಕೆಲವರಿಗೆ ಈ ಪ್ರವಾಹದಲ್ಲಿ ಕೇಲಿ ಮುಳುಗುವುದೇ ಆನಂದ !!

ವಿಷಯಾಭಿಲಾಷೆ ಮಾನವನ ಅಧಃಪತನಕ್ಕೆ ಮೂಲಕಾರಣ. ಆದರೂ ಅದು ಹಿತವಾಗಿ ಕಾಣುತ್ತದೆ. ಇದಕ್ಕಿಂತ ಸೋಜಿಗವೇನಿದೆ !!

ಭಿಕ್ಷಾಶನಂ ತದಪಿ ನೀರಸಂ ಏಕವಾರಂ
ಶಯ್ಯಾಚ ಭೂಃ ಪರಿಜನೋ ನಿಜದೇಹ
ಮಾತ್ರಂ
ವಸ್ತ್ರಂ ಸುಜೀರ್ಣಂ ಶತಖಂಡಮಯೀ
ಚ ಕಂಥಾ
ತಥಾಪಿ ವಿಷಯಾನ್ನಜಹಾತಿ ಚೇತಃ ||

ಭಿಕ್ಷಾನ್ನವೇ ಆಹಾರ. ಅದೂ ಸರಸಾನ್ನವಲ್ಲ–ನೀರಸಾನ್ನ, ಹೊಟ್ಟೆ ತುಂಬುವುದಿಲ್ಲ–ಅರ ಹೊಟ್ಟೆ ಮಾತ್ರ. ಅದೂ ಒಂದೇ ಹೊತ್ತು. ನೆಲವೇ ಸುಪ್ಪತ್ತಿಗೆ. ತನ್ನದೇ ಆದ ದೇಹ ಬಿಟ್ಟರೆ ಇಷ್ಟಮಿತ್ರರೆಂಬುವರಾರೂ ಇಲ್ಲ. ನೂರೆಂಟು ತೇಪೆ ಹಾಕಿದ್ದೇ ಉಡುಪು. ಆದರೂ ವಿಷಯೇಚ್ಛೆ ಇದೆ!! ದಟ್ಟ ದರಿದ್ರನಾದರೇನು! ಬೀದಿ ಭಿಕಾರಿಯಾದರೇನು! ಚಾಪಲ್ಯ ಚಾಪಲ್ಯವೆ!

ಕಾಲಕ್ರಮೇಣ ಘನವಾದ ಅರಮನೆಗಳು ನೆಲಸಮವಾಗುವುದುಂಟು. ಚಕ್ರವರ್ತಿಗಳು, ಅವರ ವೈಭವಗಳು ಕೊಚ್ಚಿ ಹೋಗುವುದುಂಟು. ದರ್ಪದ ಪ್ರಭುಗಳ ಅರಮನೆ, ಸೌಧಗಳಲ್ಲಿ ಜೇಡಗಳು ಬಲೆಕಟ್ಟುವುದುಂಟು. ಕಾಗೆಗೂಬೆಗಳು ಗೂಡು ಕಟ್ಟುವುದುಂಟು. ಶಕ್ತಿ ಸಾಮರ್ಥ್ಯಗಳು, ಸೌಂದರ್ಯ ಐಶ್ವರ್ಯಗಳು ಕೇವಲ ನೆನಪಾಗುಳಿಯಬಹುದು. ಇದಕ್ಕೆಲ್ಲ ಕಾರಣವೇನು? ಈ ಪ್ರಶ್ನೆಗುತ್ತರ ಒಬ್ಬೊಬ್ಬರೊಂದೊಂದು ರೀತಿಯಲ್ಲಿ ಕೊಡಬಹುದು. ಆದರೆ ಸರ್ವಜನ ಸಮ್ಮತವಾದ ಉತ್ತರವನ್ನು ಭರ್ತೃಹರಿ ಹೀಗೆ ಕೊಡುತ್ತಾನೆ.

ಸಾ ರಮ್ಯಾನಗರೀ ಮಹಾನ್‌ಸನೃಪತಿಃ
ಸಾಮಂತ ಚಕ್ರಂ ಚ
ತತ್‌ಪಾರ್ಶ್ವೇ ತಸ್ಯ ಚ ಸಾ
ವಿದಗ್ಧ ಪರಿಷತ್ತಾಶ್ಚಂದ್ರಬಿಂಬಾನನಾಃ
ಉದ್‌ವೃತ್ತಸ್ಯ ಚ ರಾಜಪುತ್ರನಿವಹಸ್ತೇ
ವಂದಿನಸ್ತಾಃ ಕಥಾ
ಸರ್ವಂ ಯಸ್ಯವಶಾದಗಾತ್ ಸ್ಮೃತಿ
ಪಥಂ ಕಾಲಾಯ ತಸ್ಮೈನಮಃ ||

ಸತ್ಯಂ–ಶಿವಂ–ಸುಂದರಂ ಎಂಬ ಮಾತು ಬಳಕೆಯಲ್ಲಿದೆ. ಜಗತ್ತಿನಲ್ಲಿ ಅನೇಕ ಸುಂದರ ವಸ್ತುಗಳಿರಬಹುದು. ಆದರೇನಂತೆ? ಅವೆಲ್ಲ ಸತ್ಯವೇ? ಮಂಗಳಕರವಾಗಿವೆಯೆ? ಕೇವಲ ಸುಂದರಂ ಆದರೇನಾಯ್ತು–ಅದು ಶಿವಂ ಆಗಿರಬೇಕು, ಸತ್ಯಂ ಆಗಿರಬೇಕು, ರಮ್ಯ–ರಮಣೀಯ–ಸುಂದರ–ಕಮನೀಯ – ಇವೆಲ್ಲ ಏನು? ಎಲ್ಲಿದೆ? – ಎಂದು ಗಂಭೀರವಾಗಿ ಯೋಚನೆ ಮಾಡಿದಾಗ ದೊರೆಯುವುದು ಒಂದೇ ಉತ್ತರ–ಇದೆಲ್ಲ ಕೇವಲ ಭಾವನೆಗಳು. ನಶ್ವರ ವಸ್ತುವಿಗೂ, ಭಯಂಕರ ವಸ್ತುವಿಗೂ ಕವಿಗಳು ಸೌಂದರ್ಯದ ಕಿಂಕಾಪು ಹೊದಿಸಿರಬಹುದು. ಅಥವ ಉದ್ವೇಗಪೂರ್ಣ ಮನಸ್ಸಿಗೆ ಕೆಲವು ವಸ್ತುಗಳು – ಕೆಲವು ಸಂದರ್ಭದಲ್ಲಿ ಸುಂದರವೆನಿಸಬಹುದು. ಭಾರತೀಯ ಮನೀಷಿಗಳು ಒಂದು ಕಡೆ ಸೌಂದರ್ಯವನ್ನಾರಾಧಿಸಿದ್ದಾರೆ ಇನ್ನೊಂದು ಕಡೆ ಅದನ್ನು ಹೀನಾಯವಾಗೂ ಕಂಡಿದ್ದಾರೆ. ಮತ್ತೊಂದು ಕಡೆ ಉದಾಸೀನಮಾಡಿದ್ದಾರೆ. ಅದರತ್ತ ಕಣ್ಣೆತ್ತಿ ಸಹ ನೋಡಿಲ್ಲ. ಶಾರೀರಿಕ ಸೌಂದರ್ಯ ಕಲ್ಪನೆಯಂತೂ ಕವಿತಾವೇಶಜನ್ಯವಾದದ್ದು, ಅಥವ ಮಾನಸಿಕ ಭ್ರಮಾಜನ್ಯವಾದದ್ದು–ವಸ್ತುಸ್ಥಿತಿ ಹಾಗಿಲ್ಲ. ಚಂದ್ರನಂತೆ ಮುಖ–ಕಮಲದಂತೆ ಕಣ್ಣು, ಸಂಪಗೆಯಂತೆ ಮೂಗು-ಇತ್ಯಾದಿ ಮಾತುಗಳೆಲ್ಲ ಅಲಂಕಾರಿಕ ಪ್ರಯೋಗ ವೈಖರಿಯೇ ಹೊರತು ನಿಜವಲ್ಲ. ಸತ್ಯವಲ್ಲದ ಸೌಂದರ್ಯಕಲ್ಪನೆ ಭ್ರಮಾಜನ್ಯವಾದದ್ದು, ಶಿವವಲ್ಲದ ಸೌಂದರ್ಯ ಹಾನಿಕಾರಕವಾದದ್ದು, ಕಾವ್ಯದ ವರ್ಣನೆ ಬೇರೆ. ವೇದಾಂತದ ವಸ್ತುಸ್ಥಿತಿ ನಿರೂಪಣೆ ಬೇರೆ. ಇದರಲ್ಲಿ ಯಾವುದು ಸತ್ಯ? ಯಾವುದು ಶ್ರೇಯಸ್ಕರ?

ರಮ್ಯಾಶ್ಚಂದ್ರಮರೀಚಯಸ್ತೃಣವತೀ
ರಮ್ಯಾ ವನಾನ್ತಸ್ಥಲೀ
ರಮ್ಯಂ ಸಾಧುಸಮಾಗಮಾಗತಸುಖಂ
ಕಾವ್ಯೇಷುರಮ್ಯಾಃಕಥಾ
ಕೋಪೋಪಾಹಿತ ಭಾಷ್ಯಬಿಂದು ತರಳಂ
ರಮ್ಯಂ ಪ್ರಿಯಾಯಾ ಮುಖಂ
ಸರ್ವಂ ರಮ್ಯಂ ಅನಿತ್ಯತಾಮುಪಗತೇ
ಚಿತ್ತೇನ ಕಿಂಚಿತ್ ಪುನಃ ||

ಸಾಂದ್ರ ಚಂದ್ರಿಕೆ ಸುಂದರ, ಹರಿತ ಶ್ಯಾಮಲ ಕಾನನ ಭೂಮಿ ಸುಂದರ, ಕಾವ್ಯ ಕಥೆ ಸುಂದರ. ಹುಸಿಕೋಪ ಪ್ರದರ್ಶಿಸುವ ಕಾಂತಾಮುಖ ಸುಂದರ. ನಿಜ, ಎಲ್ಲಿಯ ತನಕ? ಇದೆಲ್ಲ ಅನಿತ್ಯ–ಸತ್ಯವಲ್ಲ–ಶಿವಕರವಲ್ಲ ಎಂಬ ತಿಳಿವಳಿಕೆ ಬರುವ ತನಕ. ಒಮ್ಮೆ ಈ ತಿಳಿವಳಿಕೆ ಬಂತೋ-ಇವೆಲ್ಲ ಸುಂದರವಲ್ಲವೇ ಅಲ್ಲ. ಜ್ಞಾನೋದಯವಾಗುವವರೆಗೂ ಜಗತ್ತಿನ ಆಕರ್ಷಣೆ–ಅಷ್ಟೆ. ಏಕೆಂದರೆ, ಆಗ ಆವೇಗಕ್ಕಿಂತಲೂ ವಿವೇಕ ಹೆಚ್ಚಾಗಿ ಕೆಲಸಮಾಡುತ್ತದೆ. ವಿವೇಕದ ಸಲಹೆ ಸದಾ ಶ್ರೇಯಸ್ಕರವೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಭರ್ತೃಹರಿ ಸೌಂದರ್ಯವನ್ನು ವಿಪುಲವಾಗಿ ಬಣ್ಣಿಸಿದ್ದಾನೆ, ಆದರೆ ಅದರ ಅನಿತ್ಯತೆ

ಯನ್ನು ಮರೆತಿಲ್ಲ. ಪ್ರಾರಂಭದಲ್ಲಿ ನೀತಿ ಶತಕ, ಕೊನೆಯಲ್ಲಿ ವೈರಾಗ್ಯಶತಕ ಮಧ್ಯೆ ಶೃಂಗಾರಶತಕವನ್ನು ಜೋಡಿಸಿದ್ದಾನೆ. ಬಹುಶಃ ಈ ಜೋಡಿಕೆಯಲ್ಲೂ–ರಚನಾಕ್ರಮ ದಲ್ಲೂ ಒಂದು ಅರ್ಥವಿದೆ. ನೀತಿ ವೈರಾಗ್ಯ ಗಳ ಹಿಡಿತದಲ್ಲಿರುವ ಶೃಂಗಾರ ಹಲ್ಲು ಕಿತ್ತ ಹಾವು!! ನೀತಿ ವೈರಾಗ್ಯಗಳು ಶೃಂಗಾರದ ಆಕರ್ಷಣೆಗೆ ಸಿಕ್ಕುವ ವಸ್ತುಗಳಲ್ಲ, ಅದನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳುವ ಸಮರ್ಥ ತತ್ತ್ವಗಳು. ಬಲವಾದ ಕುದುರೆ ಸವಾರಿಗೆ ಬೇಕು, ಆದರದು ನಮ್ಮ ಹಿಡಿತದಲ್ಲಿರಬೇಕು. ಇದು ಸುಭಾಷಿತಕಾರನ ಇಂಗಿತವಿರಬಹು ದೆಂದು ಹಿರಿಯರು ಅಭಿಪ್ರಾಯಪಡುತ್ತಾರೆ. ಮನುಷ್ಯ ಜಿತೇಂದ್ರಿಯನಾಗಿರಬೇಕು. ಗತೇಂದ್ರಿಯನಾಗಬಾರದು. ಸದುಪಯೋಗ ಮಾಡಿಕೊಳ್ಳುವುದು ಬುದ್ಧಿವಂತಿಕೆಯೇ ಹೊರತು ಅಪಾಯಮಾಡಿಕೊಳ್ಳುವುದು– ವಿಪತ್ತು ತಂದುಕೊಳ್ಳುವುದು ಜಾಣತನ ವಲ್ಲ.

ವ್ಯಕ್ತಿ ಅನೇಕ ಮಂದಿಗೆ ಋಣಿಯಾಗಿದ್ದಾ ನೆಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಅನ್ನ ಕೊಟ್ಟವರು, ಬಟ್ಟೆ ಕೊಟ್ಟವರು, ಜನ್ಮಕೊಟ್ಟವರು, ತಿಳಿವಳಿಕೆ ಕೊಟ್ಟವರು, ಬುದ್ಧಿ ಮಾತು ಹೇಳಿ ತಿದ್ದಿದವರು,ಹರ್ಷದಲ್ಲಿ ಪಾಲ್ಗೊಂಡವರು, ಸಂಕಟಕಾಲದಲ್ಲಿ ಬೆಂಬಲ ನೀಡಿದವರು – ಹೀಗೆ ಅನೇಕರಿಗೆ ನಾವು ಋಣಿಗಳಾಗಿರುತ್ತೇವೆ. ಇದಲ್ಲದೆ ಪಂಚಭೂತಗಳಿಗೂ ಋಣಿಗಳಾಗಿರುತ್ತೇವೆ. ನಮ್ಮ ದೇಹವೇ ಪಂಚಭೂತಗಳ ಕೊಡುಗೆ ಯಲ್ಲವೇ ? ಈ ಎಲ್ಲರ ಋಣವನ್ನೂ ತೀರಿಸಿ, ಯಥಾಶಕ್ತಿ ತೀರಿಸಿ, ಈ ಲೋಕದ ವ್ಯವ ಹಾರ ಮುಗಿಸಿಕೊಂಡು ಹೊರಡುವುದು ಕ್ಷೇಮಕರ. ಅಂತಿಮ ಪ್ರಯಾಣಕ್ಕೆ ಹೇಗೆಲ್ಲ ಸಿದ್ಧತೆಮಾಡಿಕೊಳ್ಳಬೇಕು ? ಈ ಋಣ ಗಳನ್ನು ತೀರಿಸುವ ಬಗೆ ಹೇಗೆ? ಸಾವಿಗಾಗಿ ಮಾಡಿಕೊಳ್ಳುವ ಸಿದ್ಧತೆಗೆ ಬಾಳೆಂದು ಹೆಸರು, ಭರ್ತೃಹರಿ ತನ್ನ ಅವಸಾನಕಾಲದ ಅಂತಿಮ ಇಚ್ಛೆಯನ್ನು, ಕೃತಜ್ಞತಾಭಾವ ದಿಂದ ತುಂಬ ತುಳುಕುವ ಮುದ್ದಾದ, ಗಂಭೀರವಾದ, ಮಾತುಗಳಲ್ಲಿ ವ್ಯಕ್ತಪಡಿ ಸಿದ್ದಾನೆ.

ಮಾತರ್ಮೇದಿನಿ, ತಾತಮಾರುತ,
ಸಖೇ ತೇಜಃ ಸುಬಂಧೋಜಲ
ಭ್ರಾತರ್ವ್ಯೋಮ–ನಿಬದ್ಧ ಏಷಭವತಾಂ
ಅಂತ್ಯಪ್ರಣಾಮಾಂಜಲಿಃ |
ಯುಷ್ಮತ್ಸಂಗವಶೋಪಜಾತ ಸುಕೃತ
ಸ್ಫಾರ ಸ್ಫುರನ್ನಿರ್ಮಲ
ಜ್ಞಾನಾಪಾಸ್ತ ಸಮಸ್ತ ಮೋಹ
ಮಹಿಮಾ ಲೀಯೇ ಪರಬ್ರಹ್ಮಣಿ |

ಭೂತಾಯಿ ಮೊದಲಾದ ಪಂಚಭೂತಗಳೇ– ನಿಮಗೆಲ್ಲ ಇದೇ ನನ್ನ ಕೊನೆಯ ನಮಸ್ಕಾರ. ನಿಮ್ಮೆಲ್ಲರ ನೆರವಿನಿಂದ ಜನ್ಮ ಪಡೆದ ನಾನು ಅಜ್ಞಾನವೆಲ್ಲವನ್ನೂ ಕಳೆದುಕೊಂಡಿದ್ದೇನೆ. ಅಖಂಡ ಜ್ಞಾನ ಪಡೆದುಕೊಂಡು – ಪರ ಬ್ರಹ್ಮವಸ್ತುವಿನಲ್ಲಿ ಲೀನನಾಗಲಿರುವ ಈ ಸಮಯದಲ್ಲಿ ನೀವೆಲ್ಲರೂ ನನಗೆ ಅನುಮತಿ ಕೊಡಿ.

ಈ ಮಾತು ಪ್ರತಿ ಜೀವಿಯ ಬಾಳಿನ ಚರಮಗೀತೆಯಾಗಲು ಅರ್ಹವಾಗಿದೆ. ಭರ್ತೃ ಹರಿಯ ಸುಭಾಷಿತ ತ್ರಿಶತಿ ಜನರ ನಾಲಿಗೆಯ ಮೇಲೆ ನಲಿದಾಡಬೇಕಾದ ಕೃತಿ. ಅದು ಭಾರತೀಯ ಸಂಸ್ಕೃತಿಯನ್ನು ಪ್ರತಿನಿಧಿ ಸುತ್ತದೆ–ಪ್ರತಿಬಿಂಬಿಸುತ್ತದೆ. ಅದೊಂದು ಅಪಾರ ಲೋಕಾನುಭವ ಜನ್ಯ ವಿಚಾರಧಾರೆ. ಈ ವಾಕ್ಯ ಮಾಣಿಕ್ಯ ಕೋಶ, ಲೋಕಾನು ಭವ ರತ್ನಕೋಶ. ಮಾರ್ಗದರ್ಶಕ ಜ್ಯೋತಿ.

## ಪುಸ್ತಕವಿಮರ್ಶೆ

# ಕನ್ನಡದ ಶ್ರೀಮಂತಿಕೆಯನ್ನು ಹೆಚ್ಚಿಸಿದ ಕೃತಿ

ಸಂಸ್ಕೃತ ಕವಿ ಚರಿತ್ರೆ – ಸಂಪುಟ–II. ಲೇಖಕರು: ಎಂ. ಎಸ್. ಶ್ರೀನಿವಾಸ ಅಯ್ಯಂಗಾರ್; ಸಂಪಾದಕರು: ಎಸ್.ಕೆ. ರಾಮಚಂದ್ರರಾವ್. ಪ್ರಕಾಶಕರು: ಎಸ್. ಕೆ. ಆನಂದಮ್ಮ, 730, 38ನೇ ಕ್ರಾಸ್, 16ನೇ ಮೇನ್, IV ಟಿ. ಬ್ಲಾಕ್, ಜಯನಗರ ಬೆಂಗಳೂರು – 11. ಎರಡನೆಯ ಮುದ್ರಣ–1978, ಪುಟಗಳು: XVII + 916. ಬೆಲೆ: ರೂ 60–00.

ಸಾವಿರಾರು ವರ್ಷಗಳಿಂದ ವಿದ್ವಾಂಸರೂ ರಸಿಕರೂ ಇಡಿಯ ಭರತಖಂಡದಲ್ಲಿ ಮೆಚ್ಚಿಕೊಂಡಾಡಿರುವ ಸಾಹಿತ್ಯವೆಂದರೆ ಸಂಸ್ಕೃತ ಭಾಷೆಯ ಮಾಧ್ಯಮದಲ್ಲಿ ಪದ್ಯ–ಗದ್ಯ–ಚಂಪೂ ಕಾವ್ಯ, ನಾಟಕ, ಶತಕಾದಿ ಲಘು ಕಾವ್ಯಗಳ ಅಮೂಲ್ಯ ರತ್ನಗಳಿಂದ ರಂಜಿಸುತ್ತಿರುವ ಸಾಗರೋಪಮ ಮಹಾಭಂಡಾರ. ವಾಲ್ಮೀಕಿ, ಕಾಳಿದಾಸ, ಭವಭೂತಿ, ಬಾಣ, ದಂಡಿ, ಮಾಘ, ಹರ್ಷ, ಭಾರವಿ ಮುಂತಾದ ಮಹಾಕವಿಗಳು ಈ ಅಕ್ಷಯ ಕಾವ್ಯಪರಂಪರೆಯ ಪ್ರವರ್ತಕರು. ಅವರ ಕಣ್ಬೆಳಕಿನಲ್ಲಿ ಅನೇಕ ಸರಸಕವಿಗಳೂ ವಿದ್ವತ್ಕವಿಗಳೂ ಭಾರತದ ನಾನಾ ಪ್ರದೇಶಗಳಲ್ಲಿ ಸ್ಫೂರ್ತಿಗೊಂಡು ಹೊಸ ರಚನೆಗಳನ್ನು ಅಸಂಖ್ಯವಾಗಿ ನೀಡಿದ್ದಾರೆ. ಪ್ರಭಾವಗೊಂಡವರು ಮಾತ್ರವಲ್ಲ, ಹೊಸ ಕ್ಷಿತಿಜಗಳನ್ನು ತೆರೆಯಲು ಹೆಣಗಿದವರೂ ಅನೇಕರಿದ್ದಾರೆ. ಹತ್ತೊಂಭತ್ತನೆಯ ಶತಮಾನದವರೆಗೆ ಪ್ರಾಯಿಕವಾಗಿ ಪ್ರಖ್ಯಾತ ಮಹಾಕವಿಗಳ ಉದ್ಗ್ರಂಥಗಳಿಂದ ಆಯ್ದ ಕೆಲವು ಭಾಗಗಳನ್ನು ಮಾತ್ರ ಅಭ್ಯಾಸ ಮಾಡಿ ಸಂಸ್ಕೃತ ಪಂಡಿತರೆಂಬ ಪ್ರಶಸ್ತಿ ಗಳಿಸುವ ಪರಿಪಾಠ ನಮ್ಮಲ್ಲಿದ್ದುದರಿಂದ, ಐತಿಹಾಸಿಕ ದೃಷ್ಟಿಕೋನದಿಂದ ಎಲ್ಲ ಸಾಹಿತ್ಯ ಕ್ಷೇತ್ರವನ್ನೂ ಪುನರವಲೋಕಿಸಿ, ವರ್ಗೀಕರಿಸಿ, ವಿಮರ್ಶಿಸಿ ಸಾಹಿತ್ಯ ಚರಿತ್ರೆ ಬರೆಯುವ ಪ್ರವೃತ್ತಿಯೆಂಬುದೇ ಇರಲಿಲ್ಲ. ಮ್ಯಾಕ್ಸ್‌ಮ್ಯುಲರ್, ಮೆಕ್‌ಡಾನೆಲ್, ಕೀತ್, ವಿಂಟರ್‌ನಿಟ್ಸ್ ಮುಂತಾದ ಪಾಶ್ಚಾತ್ಯ ವಿದ್ವಾಂಸರು ಪರಿಶ್ರಮ ವಹಿಸಿ ಈ ಕಾರ್ಯವನ್ನು ಮಾಡಿ ನಮ್ಮ ಪ್ರಾಚೀನ ಸಾಹಿತ್ಯದ ವಿವಿಧ ಶಾಖೆಗಳ ಅಂತರಂಗ–ಬಹಿರಂಗಗಳ ಸಂದರ್ಶನಕ್ಕೆ ತುಂಬಾ ಉಪಕಾರ ಮಾಡಿದರು. ಆದರೆ ಇವರುಗಳು ಕೂಡ ತಮ್ಮ ಸಂಕ್ಷಿಪ್ತ–ಸಮೀಕ್ಷೆಗಳಲ್ಲಿ ವಿವಿಧ ಸಾಹಿತ್ಯ ಶಾಖೆಗಳ ಸ್ಥೂಲ ರೂಪರೇಷೆಗಳನ್ನು ಮಾತ್ರ ಗಮನಿಸುತ್ತಿದ್ದುದರಿಂದ, ಸಾವಿರಾರು ಗ್ರಂಥಕಾರರನ್ನು ಇವರು ಕೈಬಿಡುವಂತಾಗಿತ್ತು. ಹಿಂದೊಂದು ಸಾಹಿತ್ಯಪ್ರಕಾರದಲ್ಲೂ ಶಿಖರಪ್ರಾಯರಾದವರನ್ನು ಮಾತ್ರ ಇವರು ಹೆಸರಿಸಿ, ಕಾಲದೇಶಾದಿ ವಿವರಗಳನ್ನು ನಿರ್ಣಯಿಸಲು ಯತ್ನಿಸಿ, ತಮ್ಮ ಸಂಸ್ಕಾರಾನುಸಾರ ಐರೋಪ್ಯ ಸಾಹಿತ್ಯಕೃತಿಗಳೊಡನೆ ತುಲನೆಗೊಂಡಾಗ ಸಂಸ್ಕೃತಕೃತಿಗಳು ಹೇಗೆ ಕಾಂತಿಹೀನವಾಗುತ್ತವೆಂಬುದನ್ನೂ ಉಲ್ಲೇಖಿಸುತ್ತಿದ್ದರು. ಭಿನ್ನ ರುಚಿಯ ಪರಿಣಾಮವಾಗಿ ಎಷ್ಟೋ ಒಳ್ಳೆಯವೆಂದು ನಮ್ಮವರು ಸಂಪ್ರದಾಯಿಕವಾಗಿ ಮೆಚ್ಚುತ್ತಿದ್ದ ಅನೇಕ ಕವಿಗಳೂ ಕೃತಿಗಳೂ ಅವರ ಸಾಹಿತ್ಯ ಚರಿತ್ರೆಗಳಲ್ಲಿ ಸೇರದೆಯೇ ಉಳಿದುಹೋಗುವಂತಾಯಿತು. ಕ್ರಿ. ಶ. ಹನ್ನೆರಡನೆ ಶತಮಾನದ ಉತ್ತರಕಾಲೀನ ಕೃತಿಗಳಿಗಂತೂ ಈ ಮಾತು ಮತ್ತಷ್ಟು ಅನ್ವಯಿತ್ತದೆ, ಸರಾಸಗಟಾಗಿ ಅವೆಲ್ಲ ಸಾಹಿತ್ಯದ ಅವನತಿಯ ಕಾಲದಲ್ಲಿ ಬಂದ ಅನುಕರಣ ಗ್ರಂಥಗಳೆಂದೂ, ಪಂಡಿತಮಾತ್ರಪ್ರಿಯವಾದ ಆಡಂಬರದ ಕೃತಕ ಕೃತಿಗಳೆಂದೂ ಹಣೆಪಟ್ಟಿ ಪಡೆಯುತ್ತವೆ.

ಈ ಕೊರತೆಯನ್ನು ಹೋಗಲಾಡಿಸಲು ಇಂಗ್ಲೀಷಿನಲ್ಲಿ ಸಂಸ್ಕೃತ ಸಾಹಿತ್ಯ ಬರೆದ ಭಾರತೀಯರಲ್ಲಿ ತಿರುಪತಿಯ ಭಕ್ತರಾದ ಎಂ. ಕೃಷ್ಣಮಾಚಾರಿಯರ್ ಅವರು ಅಗ್ರಗಣ್ಯರು. ಆದರೆ ಅವರು ಇಡಿಯ ಕ್ಷೇತ್ರವನ್ನೂ ಒಂದೇ ಸಂಪುಟದಲ್ಲಿ ಸಂಗಡಿಸಲು ಹೊರಟಿದ್ದರಿಂದ ಕೇವಲ ಕೃತಿಗಳ ನಾಮನಿರ್ದೇಶನದಿಂದಲೇ ಒಟ್ಟಾರೆ ತೃಪ್ತಿಗೊಳ್ಳುವಂತಾಯಿತು. ಈ ದೋಷದಿಂದ ಮುಕ್ತರಾಗಲು 'ಸಾಹಿತ್ಯಚರಿತ್ರೆ'ಯ ಬದಲು 'ಕವಿಚರಿತ್ರೆ'ಯನ್ನು ಬರೆಯುವ ಸಂಪ್ರದಾಯವನ್ನು ರಾ. ನರಸಿಂಹಾಚಾರ್ ಅವರು ಕನ್ನಡದಲ್ಲಿ ಮೊದಲಿಗೆ ಆರಂಭಿಸಿ ಕೀರ್ತಿಶಾಲಿಗಳಾದರು. ಕನ್ನಡ ಸಾಹಿತ್ಯವನ್ನು ನರಸಿಂಹಾಚಾರ್ಯರು ಪರಿಚಯಿಸಿದ ವಿಸ್ತೃತ ಹಾಗು ಭಾರತೀಯ ದೃಷ್ಟಿಕೋನವನ್ನು, ಪ್ರಸ್ತುತ ಗ್ರಂಥಕಾರರಾದ ಶ್ರೀನಿವಾಸ ಅಯ್ಯಂಗಾರ್ ಅವರೂ ತಮ್ಮದಾಗಿಸಿಕೊಂಡು ಯಶೋಭಾಜನರಾಗಿದ್ದಾರೆ. ಈಗ ಸುಮಾರು ಐವತ್ತು ವರ್ಷಗಳ ಹಿಂದೆಯೇ ಪ್ರಕಟಗೊಂಡ ಅವರ ಸಂಸ್ಕೃತ ಕವಿಚರಿತ್ರೆ ಎಲ್ಲ ಸಂಸ್ಕೃತ ಪ್ರೇಮಿಗಳ ಮನ್ನಣೆಯನ್ನೂ ವಿಶೇಷವಾಗಿ ಗಳಿಸಿತು. ಅದು ಮತ್ತೆ ಇಂದಿನ ಪೀಳಿಗೆಯವರಿಗೂ ದೊರೆಯುವಂತೆ ಅವರ ಸುಪುತ್ರರೂ ಸೊಸೆಯೂ ಶ್ರಮಿಸಿ ನಾಡಿನ ಖ್ಯಾತ ವಿದ್ವಾಂಸರಾದ ಪ್ರೊ|| ಎಸ್ ಕೆ. ರಾಮಚಂದ್ರರಾವ್ ಅವರಿಂದ ಪರಿಷ್ಕೃತವಾದ ಗ್ರಂಥದ ಎರಡನೆಯ ಸಂಪುಟದ ಈ ಎರಡನೆಯ ಆವೃತ್ತಿಯನ್ನು ತುಂಬಾ ಮನೋರಂಜಕವಾಗಿ ಹೊರತಂದಿದ್ದಾರೆ. ಈ ಗ್ರಂಥ ಚಿರಕಾಲ ಕನ್ನಡ ನಾಡಿನ ಎಲ್ಲ ಸಂಸ್ಕೃತ ಅಭ್ಯಾಸಿಗಳಿಗೂ ಸಹಾಯಕ ಗ್ರಂಥವಾಗಿ ನಿಲ್ಲಬಲ್ಲಂತಹುದು.

ಭಾರತದ ಮೂಲೆಮೂಲೆಯಲ್ಲಿಯೂ ಕಾಲದಿಂದ ಕಾಲಕ್ಕೆ ಬಂದ ಎಲ್ಲ ಕೃತಿಗಳನ್ನೂ ಯಾವ ಒಬ್ಬನೂ ಪರಿಚಯಿಸುವುದು ಅಸಾಧ್ಯ. ಸಾವಿರಾರು ಕವಿಗಳೂ ಕೃತಿಗಳೂ ಅನಿವಾರ್ಯವಾಗಿ ಇಲ್ಲಿಯೂ ಬಿಟ್ಟುಹೋಗಿವೆ. ಸಂಪಾದಕರಿಗೂ ಆ ಅರಿವಿದೆ. ಆದರೆ ಇಲ್ಲಿ ನಾವು ಶ್ಲಾಘಿಸಬೇಕಾದ ಮಹತ್ತರ ಅಂಶವೊಂದಿದೆ. ಒಳ್ಳೆಯ ಸಾಹಿತ್ಯಕ ಭಾರತೀಯ ಅಭಿರುಚಿಯಿಂದ

ಲೇಖಕರು ಹದಿಮೂರನೆಯ ಶತಮಾನದಿಂದ ಇಪ್ಪತ್ತನೆಯ ಶತಮಾನದ ಮೊದಲ ಚತುಷ್ಪದವರೆಗೆ ತಮ್ಮ ಗಮನ ಸೆಳೆದ ಮುಖ್ಯ ಕವಿಗಳ ಹಾಗು ಕೃತಿಗಳ ಸಂಕ್ಷಿಪ್ತವಾದರೂ ಸಾರವತ್ತಾದ ಸಮೀಕ್ಷೆಯನ್ನು ನೀಡಿರುವರಲ್ಲದೆ, ಪ್ರತಿ ಕವಿಯಿಂದಲೂ ಒಂದೆರಡಾದರೂ ಉದಾಹರಣೆಗಳನ್ನೆತ್ತಿಕೊಟ್ಟು ಅವನ ಕಾವ್ಯದ ರಸದ ಆಸ್ವಾದನೆಯನ್ನು ಪಾಠಕರಿಗೆ ಒದಗಿಸಿದ್ದಾರೆ. ವಿಶೇಷತಃ ಮೈಸೂರು ಅರಸರ ಆಸ್ಥಾನಕವಿಗಳ ಉಲ್ಲೇಖವನ್ನು ವಿವರವಾಗಿ ಮಾಡಿದ್ದಾರೆ. ತಿರುಪತಿ, ಮೇಲುಕೋಟೆ, ಶೃಂಗೇರಿ ಮುಂತಾದ ಮಠಾಧೀಶರ ಆಶ್ರಯದಿಂದ ಬಂದ ಕೃತಿಗಳೂ ಕೆಲವೊಂದು ಇಲ್ಲಿ ಪ್ರವೇಶಪಡೆದಿವೆ.

ಮಾನ್ಯ ಸಂಪಾದಕರು ಇಲ್ಲಿ ಬಂದಿರುವ ಅನೇಕ ಸಹಸ್ರ ಕವಿ-ಕೃತಿಗಳ ಅಕಾರಾದಿ ಸೂಚಿಗಳನ್ನು ಗ್ರಂಥದ ಕಡೆಗೆ ಕೊಟ್ಟಿರುವುದರಿಂದ ಪಾಠಕರು ಕಷ್ಟವಿಲ್ಲದೆ ಗ್ರಂಥದಿಂದ ತಮಗೆ ಬೇಕಾದ ವಿಷಯವನ್ನು ಸುಲಭವಾಗಿ ಗ್ರಹಿಸಲು ಅನುಕೂಲವಾಗಿದೆ. ಇಂತಹದೊಂದು ಉತ್ತಮ ಉದ್ಗ್ರಂಥ ಕನ್ನಡದಲ್ಲಿ ಬಂದು ಕನ್ನಡದ ಶ್ರೀಮಂತಿಕೆಯನ್ನು ಹೆಚ್ಚಿಸಿದೆಯೆನ್ನಬಹುದು.

—ಡಾ|| ಕೆ. ಕೃಷ್ಣಮೂರ್ತಿ

# ಶಿಲಾವಿಗ್ರಹ ನೀಡಿಕೆ ಯೋಜನೆಗಳು

ವಿವಿಧ ಹಿಂದೂ ದೇವಾಲಯಗಳಲ್ಲಿ ಪ್ರತಿಷ್ಠಾಪನೆಗಾಗಿ ತಿ. ತಿ. ದೇವಸ್ಥಾನಗಳು ಶಿಲಾವಿಗ್ರಹ ನೀಡುವಿಕೆಯ ಎರಡು ಯೋಜನೆಗಳನ್ನು ಅಂಗೀಕರಿಸಿವೆ.

ವಿಗ್ರಹ ದಾನ ಯೋಜನೆಯಲ್ಲಿ ವಿವಿಧ ದೇವಾಲಯಗಳಿಗೆ ಪ್ರತಿಷ್ಠಾಪನೆಗಾಗಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀದೇವಿಯವರ ವಿಗ್ರಹಗಳನ್ನು ನೀಡಲಾಗುವುದು. ಇದಕ್ಕಾಗಿ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಾಧಿಕಾರಿಗಳಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಮಂಡಲ ಅಧಿಕಾರಿ ಅಥವಾ ಅಸಿಸ್ಟೆಂಟ್ ಕಮೀಷನರ್‌ಗಿಂತ ಕಡಮೆಯವರಲ್ಲದ ಸ್ಥಳೀಯ ದೇವಾಲಯ ಆಲಾಖಾಧಿಕಾರಿಗಳಿಂದ ಪ್ರಮಾಣಪತ್ರಗಳನ್ನು ಕಳುಹಿಸಬೇಕು.

ಹಿಂದೂ ದೇವಾಲಯಗಳಿಗಾಗಿ ಇತರ ಎಲ್ಲ ದೇವ ದೇವತೆಯರ ವಿಗ್ರಹಗಳನ್ನೂ 50% ರಿಯಾಯಿತಿ ದರದಲ್ಲಿ ಒದಗಿಸಲಾಗುವುದು. ಇದಕ್ಕಾಗಿಯೂ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಯವರಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಮಂಡಲಾಧಿಕಾರಿ ಅಥವಾ ಅಸಿಸ್ಟೆಂಟ್ ಕಮೀಷನರ್ ಅವರ ಸ್ಥಾಯಿಯ ಸ್ಥಳೀಯ ಮುಜರಾಯಿ ಅಧಿಕಾರಿಯ ಪ್ರಮಾಣಪತ್ರವನ್ನು ಕಳುಹಿಸಬೇಕು.

ಕಾಲದಿಂದ ಕಾಲಕ್ಕೆ ತಿ. ತಿ. ದೇ. ಆಡಳಿತ ನಿರ್ವಾಹಕಮಂಡಳಿಯು ವಿಧಿಸುವ ಶರತ್ತುಗಳಿಗೆ ಅನುಗುಣವಾಗಿ ವಿಗ್ರಹಗಳನ್ನು ಸರಬರಾಜು ಮಾಡಲಾಗುವುದು.

ಈ ವಿಷಯದಲ್ಲಿನ ಎಲ್ಲ ವ್ಯವಹಾರಗಳಿಗೂ ಬರೆಯಬೇಕಾದ ವಿಳಾಸ – ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ. ತಿರುಪತಿ–517501.

(16ನೇ ಪುಟದಿಂದ)

'ಶಿತ್ತ ಶಿರುಕಾಲೇ' ಎಂಬ ತಿರುಪ್ಪಾವೈನ ಕೊನೆಯ ಎರಡು ಪಾಶುರುಗಳನ್ನು ಕಡ್ಡಾಯವಾಗಿ ಹೇಳುವ ವಾಡಿಕೆ ಇದೆ. ಮಾರ್ಗಶೀರ್ಷ ಮಾಸ ಬಂತೆಂದರೆ 30 ದಿನಗಳ ತಿರುಪ್ಪಾವೈ ಪ್ರವಚನ–ಉಪನ್ಯಾಸಗಳ ಕೋಲಾಹಲವನ್ನು ಎಲ್ಲೆಲ್ಲಿಯೂ ನೋಡಬಹುದು. ಶುಭವಿವಾಹಗಳಲ್ಲಿ 'ವಾರಣಮಾಯಿರಂ' (ನಾ. ತಿರುಮೊಳಿ) ಹಾಡುವುದು ಮತ್ತೊಂದು ಸಂಪ್ರದಾಯ.

ಇಡೀ ವನಿತಾ ಸಮುದಾಯಕ್ಕೆ 'ಗೋದಾಗೋಷ್ಠಿ' ಮತ್ತು 'ಅಕ್ಕನಬಳಗ' ಶ್ರೇಷ್ಠ ಮನ್ನಣೆ ಮತ್ತು ಗೌರವವನ್ನಿತ್ತು ಸ್ತ್ರೀಜನಾಂಗವನ್ನು ಸನ್ಮಾನಿಸಿದೆ. ಮೀರಾಭಜನೆಯೆಂಬ ನವನೀತವನ್ನು ನಾವೆಲ್ಲರೂ ಸವಿಯುತ್ತಿದ್ದೇವೆ. ಕೃಷ್ಣ ದೇವಾಲಯಗಳಲ್ಲಿ (ವಿಶೇಷವಾಗಿ ಉತ್ತರಭಾರತದಲ್ಲಿ) ಇದು ಒಂದು ಅನನ್ಯಕ್ರಿಯೆಯಾಗಿ ಇಂದಿಗೂ ಮುಂದುವರಿಯುತ್ತಿದೆ.

ದಕ್ಷಿಣದೇಶದಲ್ಲಿ ಗಣಪತಿಪೂಜೆ ಮತ್ತು ದೇವಾಲಯಗಳು ಪ್ರಾಬಲ್ಯಕ್ಕೆ ಬರಲು ಅವ್ವೈಯಾರ್ ಕಾರಣಳಾಗಿದ್ದಾಳೆ, ಎಂಬ ವಿಷಯವನ್ನು ತಮಿಳ್ ಸಂಗಂ (ಸಾಹಿತ್ಯ) ಚರಿತ್ರೆಯಿಂದ ತಿಳಿಯಬಹುದು

"ನಿಮ್ಮ ಮನಸ್ಸು ಗಂಗಾಪ್ರವಾಹದಂತೆ ಅವನೆಡೆಗೆ ಹರಿಯಲಿ. ಅವನನ್ನು ಪ್ರೇಮದಿಂದ ಕಾಣಿ– ಅವನಲ್ಲಿ ನಿಮ್ಮ ಹೃದಯವನ್ನು ಬಿಚ್ಚಿಡಿರಿ, ಈ ಮಾರ್ಗದಲ್ಲೇ ಅವನನ್ನು ಸಾಧಿಸಿ" ಎಂಬುದೇ ಇವರ ದಿವ್ಯವಾಣಿ. ಈ ಮೂಲಕ ಇವರು ಧರ್ಮ ಜಾಗೃತಿಯನ್ನುಂಟುಮಾಡಿ ನಾನಾ ಪುಣ್ಯ ಕ್ಷೇತ್ರಗಳನ್ನು ಸಂದರ್ಶಿಸಿ ಸತ್ಸಂಗದ ಮಹಿಮೆಯನ್ನು ಮತ್ತು 'ಭಕ್ತಿಪಂಥ' ಎಂಬ ರಾಜಮಾರ್ಗವನ್ನು ಪ್ರಕಾಶಪಡಿಸಿದ್ದಾರೆ, ಇಡೀ ವಿಶ್ವಕ್ಕೆ ಇವರ ಮಹಾನ್ ಕೊಡುಗೆಯಾದ 'ಭಕ್ತಿ–ಪ್ರಾರ್ಥನೆ' ಒಂದು ವ್ಯಾಪಕ ಮಂತ್ರವಾಗಿ ಶಾಶ್ವತವಾಗಿ ಉಳಿದಿದೆ. ಇದರಿಂದಲೇ ಐಹಿಕ ಜೀವನವನ್ನು ಸುಖಶಾಂತಿಯಿಂದ ಮುಂದುವರೆಸುವುದು ನಮ್ಮ ಕರ್ತವ್ಯವಾಗಿದೆ.

ಗೋದಾ–ಗೋವಿಂದರ ದಿವ್ಯ ಚರಣಗಳಲ್ಲಿ ಶರಣು.

*

# ನಿಜಗುಣ ಶಿವಯೋಗಿ

ಶ್ರೀ ಆರ್. ರಾಮಕೃಷ್ಣ

ನಿಜಗುಣ ಶಿವಯೋಗಿಗಳು (ಕ್ರಿ. ಶ. ಸು. 1500) ಕನ್ನಡ ಸಾಹಿತ್ಯದ ಒಂದು ವಿಶಿಷ್ಟ ಪ್ರಕಾರವಾದ ಕೈವಲ್ಯ ಸಾಹಿತ್ಯದ ಆದ್ಯ ಪ್ರವರ್ತಕರು. ಅತಿಗಹನವಾದ ಉದಾತ್ತವಾದ ತತ್ತ್ವಗಳನ್ನು ಜನಪ್ರಿಯ ಶೈಲಿಯಲ್ಲಿ ರಚಿಸಿದವರು ಅವರು. ಆಧ್ಯಾತ್ಮಿಕ ಪ್ರಪಂಚದಲ್ಲಿ ನಿಜಗುಣರ ಹೆಸರನ್ನು ಕೇಳದವರಿಲ್ಲ. ಷಟ್‌ಶಾಸ್ತ್ರವೆಂದು ಪ್ರಸಿದ್ಧವಾದ ಅವರ ಆರು ಕೃತಿಗಳು ಮುಮುಕ್ಷುಗಳಿಗೆ ಮಾರ್ಗದರ್ಶಕವಾಗಿವೆ. ನಿಜಗುಣರು ತಮ್ಮ ಅಸಾಧಾರಣ ಪ್ರತಿಭೆ ಪಾಂಡಿತ್ಯ ಸಾಧನೆ ಸಿದ್ಧಿಗಳಿಂದ ಜನತೆಯ ಮೇಲೆ ಅಚ್ಚಳಿಯದ ಪ್ರಭಾವವನ್ನು ಬೀರಿದ್ದಾರೆ.

ನಿಜಗುಣರ ಜೀವನಕ್ಕೆ ಸಂಬಂಧಿಸಿದ ವಿವರಗಳು ದೊರಕಿಲ್ಲ. ಆದುದರಿಂದ ಅವರ ಜೀವನ ಒಂದು ಆಕರ್ಷಕ ಕಥೆಯಾಗಿ ಜನಪ್ರಿಯವಾಗಿದೆಯೇ ಹೊರತು ಐತಿಹಾಸಿಕವಾಗಿ ರೂಪುಗೊಂಡಿಲ್ಲ. ಅವರನ್ನು ತತ್ತ್ವಜ್ಞಾನಿಗಳಾಗಿ, ಸಿದ್ಧಪುರುಷರಾಗಿ, ಶಿವಯೋಗಿಯಾಗಿ ಮತ್ತು ಕವಿಯಾಗಿ ಕನ್ನಡಿಗರು ಪರಿಗಣಿಸಿದ್ದಾರೆ. ನಿಜಗುಣರ ಬಗೆಗೆ ಜನಜನಿತವಾಗಿರುವ ಜನಪದ ಕಥೆಯಿದು – ಸಹಸ್ರಾಕ್ಷನೆಂಬ ರುದ್ರನು ಶಿವಲೋಕದಲ್ಲಿ ಸುರಕಿಲ ಗಣೇಶ್ವರನೆಂಬ ಗಂಧರ್ವನಾಗಿದ್ದ. ಇವನು ಶಿವನ ಅಣತಿಯಂತೆ ಮರ್ತ್ಯಲೋಕದಲ್ಲಿ ನಿಜಗುಣಿ ಎಂಬ ಹೆಸರಿನಿಂದ ಅರಸುಮನೆತನವೊಂದರಲ್ಲಿ ಜನಿಸಿದ. ತಂದೆಯ ಕಾಲಾನಂತರ ಅರಸನಾದ. ಅಧಿಕಾರದಿಂದ ಅರಸನಾದರೂ ಮಹಾ ಶಿವಭಕ್ತನಾಗಿ, ಪ್ರಜಾಪ್ರೇಮಿಯಾಗಿ ಬಾಳಿದ. ಜನರ ವಿಶ್ವಾಸದ ಪ್ರತಿನಿಧಿಯಾಗಿ ಪ್ರಜಾಪ್ರಭುತ್ವಕ್ಕೆ ಮಾನ್ಯತೆ ನೀಡಿ ರಾಜ್ಯಭಾರ ನಡೆಸಿದನಂತೆ. ಈ ಕಥೆಯೇ ಅಲ್ಲದೆ ನಿಜಗುಣರ ಲೌಕಿಕ ಜೀವನಕ್ಕೆ ಸಂಬಂಧಿಸಿದಂತೆ ದೊರಕಿರುವ ಮತ್ತಷ್ಟು ವಿವರಗಳಿವು: ನಿಜಗುಣರು ಕರ್ನಾಟಕ ರಾಜ್ಯದ ಕೊಳ್ಳೇಗಾಲ ತಾಲ್ಲೂಕಿನ ಶಂಭುಲಿಂಗನ ಬೆಟ್ಟದ ಚಿಲಕವಾಡಿ ಗ್ರಾಮದ ಸುತ್ತಮುತ್ತಲಿನ ಪ್ರದೇಶಕ್ಕೆ ರಾಜರಾಗಿದ್ದರು. ಜಂಗಮ ದಾಸೋಹದಲ್ಲಿ ಅವರಿಗೆ ವಿಶೇಷ ಆಸ್ಥೆ. ಆದರೆ ಅವರ ಪತ್ನಿ ಪತಿಯ ಧ್ಯೇಯ ಸಾಧನೆಗೆ ತಕ್ಕವಳಾಗಿರಲಿಲ್ಲ ಪತಿಯ ಜಂಗಮ ಪ್ರೇಮ ಆಕೆಗೆ ಹಿಡಿಸುತ್ತಿರಲಿಲ್ಲ. ಒಮ್ಮೆ ನಿಜಗುಣರು ಅನ್ಯಕಾರ್ಯನಿಮಿತ್ತ ಹೊರಗೆ ಹೋಗಿದ್ದಾಗ, ಜಂಗಮರು ಪ್ರಸಾದಕ್ಕೆಂದು ಅರಮನೆಗೆ ಬಂದರು. ಜಂಗಮರ ಬಗೆಗೆ ಮೊದಲಿನಿಂದಲೂ ತಾತ್ಸಾರ ಮನೋಭಾವ ತಳೆದಿದ್ದ ರಾಣಿ, ಹಸಿದು ಬಂದಿದ್ದ ಜಂಗಮರಿಗೆ ತಂಗಳು ಬಡಿಸಿದಳು. ಜಂಗಮರು ತೃಪ್ತರಾದಂತೆ ಕಾಣಲಿಲ್ಲ. ಈ ವಿಷಯ ತಿಳಿದ ನಿಜಗುಣರಿಗೆ ಬಹಳ ಖೇದವುಂಟಾಯಿತು. ಪತಿಯ ಸತ್ಕಾರ್ಯದಲ್ಲಿ ಸಕ್ರಿಯಳಾಗಿ ಪಾಲ್ಗೊಳ್ಳದ ಪತ್ನಿಯೊಡನಿರ್ದು ಫಲವೇನು ? ಎಂಬುದಾಗಿ ಯೋಚಿಸಿ, ಸಂಸಾರ ತ್ಯಜಿಸಿ ವೈರಾಗ್ಯವನ್ನು ಕೈಗೊಂಡು ಶಂಭುಲಿಂಗನ ಬೆಟ್ಟಕ್ಕೆ ಹೊರಟುಹೋದರಂತೆ.

ಅರಮನೆಯನ್ನು ತೊರೆದು ಶಂಭುಲಿಂಗನ ಬೆಟ್ಟಕ್ಕೆ ಬಂದ ನಿಜಗುಣರು ನಿರಾಶರಾಗಲಿಲ್ಲ. ಶಂಭುಲಿಂಗನ ಬೆಟ್ಟ ಅವರ ತಪೋಭೂಮಿಯಾಯಿತು. ಸಾಹಿತ್ಯದ ನೆಲೆಯಾಯಿತು. ಅರಮನೆಯಲ್ಲಿದ್ದ ಎಲ್ಲ ಗ್ರಂಥಗಳನ್ನು ತರಿಸಿಕೊಂಡು ಓದಲು ತೊಡಗಿದರು. ಅಭ್ಯಾಸ ಜಿಜ್ಞಾಸೆಗಳಿಂದ ಮೂಡಿದ ಆನಂದವನ್ನು ಕಾವ್ಯವಾಹಿನಿಯಾಗಿ ಹರಿಸಿದರು.

ನಿಜಗುಣರು ಒಬ್ಬ ತತ್ತ್ವದರ್ಶಿ, ತಪಸ್ವಿ, ಬಹುಶ್ರುತ ಕವಿ. ಅವರ ಕೃತಿಗಳು ದಾರ್ಶನಿಕತೆ ಹಾಗೂ ಕವಿತ್ವಗಳ ಸುಂದರ ಸಮನ್ವಯದಿಂದಾಗಿ ಜನಮನವನ್ನು ಆಕರ್ಷಿಸಿವೆ. ಶಾಸ್ತ್ರೀಯ ವಿಚಾರಗಳನ್ನೂ ಬಲುಸುಲಭವಾಗಿ ರೂಪಿಸಿರುವ ಉಜ್ವಲ ಪ್ರತಿಭೆ ನಿಜಗುಣರದ್ದು. ತಮ್ಮ ಅಮರ ಕೃತಿಗಳಿಂದ ಅವರು ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ದಿವ್ಯಜ್ಯೋತಿಯಾಗಿ ಬೆಳಗುತ್ತಿದ್ದಾರೆ. ಕನ್ನಡದಲ್ಲೂ ಸಂಸ್ಕೃತದಲ್ಲೂ ಅವರಿಗೆ ಅದ್ವಿತೀಯ ಪಾಂಡಿತ್ಯವಿತ್ತು. ಅವರು ರಗಳೆ, ಸಾಂಗತ್ಯ, ತ್ರಿಪದಿಯ ಛಂದೋಬಂಧಗಳಲ್ಲಿಯೇ ಅಲ್ಲದೆ ಹೃದ್ಯವಾದ ಗದ್ಯದಲ್ಲಿಯೂ ಕೃತಿಗಳನ್ನು ರಚಿಸಿ, ಕನ್ನಡ ಸಾಹಿತ್ಯಕ್ಕೆ ಅಮೂಲ್ಯ ಕೊಡುಗೆಯನ್ನಿತ್ತಿದ್ದಾರೆ. ಅವರು ರಚಿಸಿದ ಕೃತಿಗಳ ಪೈಕಿ ಏಳು ಮಾತ್ರ ಲಭ್ಯವಾಗಿವೆ. ಅವು: 1) ಅರವತ್ತುಮೂವರ ತ್ರಿವಿಧಿ, 2) ಕೈವಲ್ಯ ಪದ್ಧತಿ, 3) ಅನುಭವ ಸಾರ, 4) ಪರಮಾರ್ಥ ಗೀತೆ, 5) ಪರಮಾನುಭವ ಬೋಧೆ, 6) ಪಾರಮಾರ್ಥ ಪ್ರಕಾಶಿಕೆ, 7) ವಿವೇಕ ಚಿಂತಾಮಣಿ. ಇವುಗಳಲ್ಲಿ ಕೊನೆಯ ಆರು ಗ್ರಂಥಗಳು ಷಟ್‌ಶಾಸ್ತ್ರಗಳೆಂದು ನಾಡಿನಾದ್ಯಂತ ಪ್ರಸಿದ್ಧವಾಗಿವೆ. ಈ ಕೃತಿಗಳೇ ಅಲ್ಲದೆ ಸಂಸ್ಕೃತದಲ್ಲಿ 1) ಆತ್ಮತರ್ಕ ಚಿಂತಾಮಣಿ ಮತ್ತು 2) ದರ್ಶನಸಾರಂ ಎಂಬ ಎರಡು ಗ್ರಂಥಗಳನ್ನು ರಚಿಸಿರುವರೆಂದು ತಿಳಿದು ಬರುತ್ತದೆ. ಆದರೆ ಅವು ಉಪಲಬ್ಧವಾಗಿಲ್ಲ.

1) ಅರವತ್ತುಮೂವರ ತ್ರಿವಿಧಿ: ಈ ಕೃತಿಗೆ ಪುರಾತನರ ತ್ರಿವಿಧಿ ಎಂಬ ಹೆಸರೂ ಉಂಟು. ಭಕ್ತರು ಪ್ರತಿನಿತ್ಯ ಮನನ ಮಾಡಲು ಯೋಗ್ಯವಾದ ಒಂದು ಸ್ತೋತ್ರ ಗ್ರಂಥವಿದು. ತ್ರಿಪದಿಯಲ್ಲಿ ಕೃತಿ ರಚನೆಯಾಗಿದೆ. ತಮ್ಮವೇ ಆದ ವಿಶಿಷ್ಟ ನೇಮ ನಿಷ್ಠೆಗಳಿಂದ ಶಿವನನ್ನು ಒಲಿಸಿಕೊಂಡ ತಮಿಳುನಾಡಿನ ಅರವತ್ತುಮೂವರು ಪುರಾತನರ ಭಕ್ತಿಮಯವಾದ ಜೀವನವನ್ನು ಕುರಿತು ಒಂದೊಂದೇ ತ್ರಿಪದಿಯಲ್ಲಿ ಅವರ ಸಾಧನೆಯ ಎಲ್ಲ ಮಹತ್ತ್ವದ ಅಂಶಗಳನ್ನು ಅಡಕಗೊಳಿಸಿದ್ದಾರೆ. ಈ ಕೃತಿಯಲ್ಲಿ ಒಟ್ಟು 77 ತ್ರಿಪದಿಗಳಿವೆ. ಪ್ರಾರಂಭದಲ್ಲಿ ತಿರುನೀಲಕಂಠರ ಕಥೆಯನ್ನು ನಿಜಗುಣರು ಹೇಳಿರುವ ಬಗೆಯಿದು :

ಶಿವನಾಣೆಯಿಡೆ ತನ್ನ ಯುವತಿಯನು
ತೊರೆದು ಶಂ।
ಭುವಿನ ಕೃಪೆ ಪಡೆದ। ತಿರುನೀಲಕಂಠರ್ಗೆ।
ಸವಿಯದೊಲವಿಂದೆ ಶರಣೆಂಬೆ॥

2) ಕೈವಲ್ಯ ಪದ್ಧತಿ: ಇದು ಕನ್ನಡದ ಕೈವಲ್ಯ ಸಾಹಿತ್ಯಕ್ಕೆ ನಿಜಗುಣರ ವಿಶಿಷ್ಟ ಕೊಡುಗೆ. ಅವರ ಅನುಭಾವ ಗೀತೆಗಳ ಅಮೋಘ ಸಂಗೀತ ಕೃತಿ, ಗೀತ ಕಾವ್ಯ. (ಹಾಡುಗಬ್ಬ) ಇದರಲ್ಲಿರುವ ಗೀತಗಳು ಸಾಹಿತ್ಯ, ತತ್ತ್ವದರ್ಶನ, ಸಂಗೀತಗಳ ಸಂಗಮವಾಗಿವೆ. ಈ ಮೂರೂ ಪ್ರಕಾರಗಳಲ್ಲಿ ನಿಜಗುಣರಿಗಿದ್ದ ಅಗಾಧ ಪಾಂಡಿತ್ಯಕ್ಕೆ ಈ ಕೃತಿ ಒಂದು ಉತ್ತಮ ನಿದರ್ಶನ. ಮಾನವ ಜೀವನ ಚಕ್ರದ ಆಗುಹೋಗುಗಳನ್ನು ಆತ್ಮಾನುಭವದಿಂದ ಹಾಡಿರುವ ಗೀತಗಳ ಸಂಕಲನವಿದು. ಇದರಲ್ಲಿ ಶಿವಕಾರುಣ್ಯಸ್ಥಲ, ಜೀವಸಂಬೋಧನಸ್ಥಲ, ನೀತಿಕ್ರಿಯಾಚರ್ಯಸ್ಥಲ, ಯೋಗಪ್ರತಿಪಾದನಾಸ್ಥಲ (ಮಂತ್ರಯೋಗ, ಲಯಯೋಗ, ಹಠಯೋಗ, ರಾಜಯೋಗ, ಶಿವಯೋಗ) ಮತ್ತು ಜ್ಞಾನಪ್ರತಿಪಾದನಾಸ್ಥಲ ಎಂಬ ಐದು ಸ್ಥಲಗಳಿವೆ, ಅಲ್ಲದೆ 174 ವಚನಗಳ ಜೋಡಿ ಹಾಗು 648 ಪದ್ಯಗಳೂ ಇವೆ

**3) ಅನುಭವಸಾರ:** ತ್ರಿಪದಿ ಛಂದಸ್ಸಿನಲ್ಲಿ ಗುರು–ಶಿಷ್ಯರ ಸಂವಾದ ರೂಪದಲ್ಲಿ ರಚಿತವಾಗಿರುವ ಕೃತಿಯಿದು. ಇದು ದಶೋಪನಿಷತ್ತುಗಳ ಸಾರಸಂಗ್ರಹ. ಇದರಲ್ಲಿ 8 ಸಂಧಿ, 46 ಸೂತ್ರ, 535 ತ್ರಿಪದಿಗಳಿವೆ. ಕೃತಿಯ ಹೆಸರೇ

ಸೂಚಿಸುವಂತೆ 'ಸಕಲ ವೇದಾಂತಸಾರವ ತಿಳಿವಂತೆ ಸಾಧಕರಿಗೀ ಪ್ರಕರಣಾದೊಳೊಲಿದು ದೊರೆಯುವೆನು' ಎಂಬುದಾಗಿ ಹೇಳಿ ತಮ್ಮ ಅನುಭವದ ಸಾರವನ್ನೆಲ್ಲ ಇದರಲ್ಲಿ ಧಟ್ಟೈಯಿಳಿಸಿ ಕೊಟ್ಟಿದ್ದಾರೆ.

ಅದ್ವೈತಜ್ಞಾನಿಯು ಶರೀರೇಂದ್ರಿಯಗಳಿಂದ ಕೂಡಿದ್ದರೂ ಕಮಲಪತ್ರದಂತೆ ನಿರ್ಲಿಪ್ತನಾಗಿರುತ್ತಾನೆ. ಅವನಲ್ಲಿ ನೈಜಸ್ವರೂಪಾನಂದಾವಿರ್ಭಾವವು ಅಬಾಧಿತವಾಗಿ ಉಳಿಯುವುದು ಎಂದು ಹೇಳಿದ್ದಾರೆ. ಜೀವನ್ಮುಕ್ತ ಜ್ಞಾನಿಯು ಯಾವ ಪ್ರಯತ್ನವಿಲ್ಲದವನಾದರೂ, ಸಮುದ್ರಕ್ಕೆ ನದಿಗಳು ಬಂದು ಸೇರುವಂತೆ ಅವನಿದ್ದಲ್ಲಿಗೇ ಎಲ್ಲ ಭೋಗಭಾಗ್ಯಗಳು ಅವಾಗಿಯೇ ಬರುತ್ತವೆ. ಭೋಗ ಬಂದಾಗ ಸಂತೋಷಪಡುವುದು, ಬಾರದಿದ್ದಾಗ ವ್ಯಥೆಪಡುವುದು ಸುಜ್ಞಾನಿಯ ಲಕ್ಷಣವಲ್ಲ. ಸುಜ್ಞಾನಿಯಾದವನು ಪರಿಪೂರ್ಣನಾಗಿರುತ್ತಾನೆ ಎಂಬ ವಿಚಾರವನ್ನು ನಿಜಗುಣರು ಹೀಗೆ ಹೇಳಿದ್ದಾರೆ:

ಹಾನಾದಿಯತ್ನಂಗಳೇನು ಮಿಲ್ಲದ ಯೋಗಿ।
ಗೀ ನಿಖಿಳ ಭೋಗವಹವು ತಾವೇ ಶರಧಿ।
ಗಾ ನದಿಗಳೈದೆ ಬರೆವಂತೆ॥

ಅದ್ವೈತದರ್ಶನವನ್ನೇ ಆಧರಿಸಿ ಇಲ್ಲಿಯ ಗೀತೆಗಳನ್ನು ರಚಿಸಿರುವುದರಿಂದ, ನಿಜಗುಣರು ಈ ಕೃತಿರಚನೆಗೆ ಉಪನಿಷತ್ತಿನ ಶಂಕರಭಾಷ್ಯವನ್ನೇ ಹೆಚ್ಚು ಅವಲಂಬಿಸಿದ್ದಾರೆಂದು ಹೇಳುವವರುಂಟು. ಕೃತಿಯಲ್ಲಿಯ ನಿದರ್ಶನಗಳು ಜನಸಾಮಾನ್ಯರ ನಿತ್ಯಜೀವನದ ಘಟನೆಗಳೇ ಆಗಿರುವುದರಿಂದ ಅದ್ವೈತ ತತ್ತ್ವದ ಹಿರಿಮೆಯನ್ನು, ಉಪನಿಷತ್ತುಗಳ ಮೇಲಿರುವ ಅದ್ವೈತದ ವ್ಯಾಖ್ಯಾನವನ್ನೂ ಬಲುಸುಲಭವಾಗಿ ತಿಳಿದುಕೊಳ್ಳಲು ಈ ಕೃತಿ ಸಹಾಯಕವಾಗಿದೆ.

4) ಪರಮಾರ್ಥಗೀತೆ: ಯೋಗವಾಸಿಷ್ಠವೆಂಬ ಆಧ್ಯಾತ್ಮಿಕ ಗ್ರಂಥದಲ್ಲಿ ಹೇಳಿರುವ ವಿಷಯವನ್ನು ನಿಜಗುಣರು ತಮ್ಮ ಅನುಭವ ಪ್ರಚುರವಾದ ಲಲಿತರಗಳೆಯಲ್ಲಿ ಪ್ರತಿಬಿಂಬಿಸಿದ್ದಾರೆ ಇದರಲ್ಲಿ 11 ಗತಿ, 32 ಕಂದ, 121 ನಿರೂಪಣೆ, 1496 ಚರಣಗಳಿವೆ. ಈ ಕೃತಿ ಗುರು–ಶಿಷ್ಯರ ಸಂವಾದ ರೂಪದಲ್ಲಿದೆ. ತಾನಾರು ? ತನ್ನ ನಿಜಸ್ವರೂಪ ಯಾವುದು ? ಸೃಷ್ಟಿ ಹೇಗಾಯಿತು ? ಜನನ ಮರಣ ಸ್ವರೂಪ, ಮುಂತಾದ ಶಿಷ್ಯನ ಪ್ರಶ್ನೆಗಳಿಗೆ ಗುರು ಸಮರ್ಪಕವಾದ ಉತ್ತರವನ್ನು ಕೊಟ್ಟು ಕೊನೆಗೆ ಜೀವನ್ಮುಕ್ತನ ಚರಿತೆಯನ್ನು ಹೇಳುವನು. 'ಕೋಹಂ' ಎಂಬುದರಿಂದ ಪ್ರಾರಂಭವಾದ ತತ್ತ್ವಜಿಜ್ಞಾಸೆಯು 'ಸೋಹಂ' ಎಂಬಲ್ಲಿಗೆ ಮುಗಿಯುವುದು. 'ಅಹಂ' ಎಂಬ ಬಗೆಗೆ ಯಾರಲ್ಲಿಯೂ ಮತಭೇದ ಇರುವುದಿಲ್ಲ. ಅದು ಪರಿಚಿತವೆಂದೇ ಎಲ್ಲರ ತಿಳುವಳಿಕೆ. ಆದರೆ ನಾನು ಎಂಬುದು ನಮಗೆ ಎಷ್ಟು ಪರಿಚಿತವಾದುದೆಂದು ತಿಳಿದಿದ್ದೆವೆಯೋ ಅದು ಅಷ್ಟೇ ಅಪರಿಚಿತವಾದುದೆಂದು ಹೇಳಿದಾಗ ಆಶ್ಚರ್ಯವುಂಟಾಗುತ್ತದೆ. ನಾನು ಏನಾಗಿದ್ದೇನೆ, ಹೇಗಿದ್ದೇನೆ, ತನ್ನ ಗತಿಸ್ಥಿತಿಗಳು ಯಾವುವು ಎಂಬ ಬಗೆಗೆ ಆಸ್ತಿಕನಾಸ್ತಿಕರೆಲ್ಲ ಬೇರೆ ಬೇರೆ ರೀತಿಯಿಂದ ವಿಚಾರ ಮಾಡಿರುವುದರಿಂದ ಅವರಲ್ಲಿ ಮತಭೇದಗಳೂ ಉಂಟು. ಯಾವ ವಿಚಾರ ಅಸತ್ಯ, ಯಾವುದು ಸತ್ಯ ಎಂಬುದನ್ನು ನಿರ್ಣಯಿಸುವುದೇ ಕಷ್ಟ. ಈ ಬಗ್ಗೆ ನೈಜಸಂಗತಿಯೇನು ? ಎಂದು ಶಿಷ್ಯನು ಗುರುವನ್ನು ಕೇಳುವನು. ಇದಕ್ಕೆ ಗುರು ಉತ್ತರಿಸುವನು. ಈ ಸನ್ನಿವೇಶವನ್ನು ನಿಜಗುಣರು ಹೇಳಿರುವ ರೀತಿಯಿದು:

ಶ್ರೀಗುರುವಿಗೆ ಶಿಷ್ಯನು ಪೊಡಮಟ್ಟು
ರಾಗಂ ಮಿಗೆ ಭಕ್ತಿಯೊಳಳವಟ್ಟು
ತನ್ನ ನಿಜಸ್ಥಿತಿ ತಾನೇನೆಂದು
ಮುನ್ನಿನ ಸಂಭವವೆಂತಾಯ್ತೆಂದು
ಇನ್ನಿದು ಪರಿವ ಉಪಾಯಮಿದೆಂದು
ಸನ್ನಿಯನೀಗಳೆ.......ಪೇಳೆಂದು
ಬಿನ್ನೈಸಿದೊಡೆ ಗುರೂತ್ತಮನಂದು
ಮನ್ನಿಸಿದನು ಶಿಷ್ಯನೊಳಿಂತೆಂದು
ಕೇಳಿಲೆ ವಾಶಿಷ್ಠಾದಿಗಳಲ್ಲಿ
ಪೇಳಿದ ತತ್ತ್ವಾರ್ಥವನಿಂದಿಲ್ಲಿ
ನಿನಗರುಪುವೆ ನಾನೀ ಗೀತೆಯೊಳು
ತನುಜನೆ ಕೇಳ್ಕೆ ತಿಳಿದೊಲವಿನೊಳು

ವ್ಯಾಧಕುಲವರ್ಧಿತ ರಾಜಪುತ್ರನಂತೆ ಅವಿಕೃತ ಬ್ರಹ್ಮನೇ ಅವಿದ್ಯೆಯಿಂದ ತನ್ನ ಶುದ್ಧ ಬುದ್ಧ ಮುಕ್ತ ಸ್ವಭಾವವನ್ನು ಮರೆತು ಜೀವಭಾವದಿಂದ ಸುಖದುಃಖಗಳ ಅನುಭವ ಹೊಂದುತ್ತ ಅಂತಿಮವಾಗಿ ಗುರೂಪದೇಶದಿಂದ ಸಚ್ಚಿದಾನಂದ ಸ್ವರೂಪವನ್ನು ತಿಳಿದು ಮುಕ್ತವಾದುವುದು ಎಂಬ ವಿಚಾರವನ್ನು ನಿರೂಪಿಸಿರುವ ರೀತಿ ಮನನೀಯವಾದುದು. ಕೊನೆಗೆ ಸಪ್ತಭೂಮಿಕೆಗಳನ್ನೂ ಜೀವನ್ಮುಕ್ತನ ಚಾರಿತ್ರ್ಯವನ್ನೂ ಮನಂಬುಗುವಂತೆ ಹೇಳಿದ್ದಾರೆ.

ಬಗೆದೋರಿಕೆ ಜಗದುದ್ಭವವೆಂದು
ಬಗೆವಿಸ್ತರಿಸಿದುದೇ ಸ್ಥಿತಿಯೆಂದು
ಭಾವಿಸೆ ಬಗೆಗೆಡಲದು ಲಯವೆಂದು
ಜೀವೇಶರಿಗೇಕತ್ವಮಿದೆಂದು
ನಿರ್ವಾಣದ ನಿಜಪಂ ತಿಳಿಪಿದೆವು
ಸರ್ವಸುಭೂಮಿಗಳಂ ಪೇಳಿದೆವು
ಯೋಗದ ಸಿದಿಗಳಂ ತೋರಿದೆವು
ಯೋಗಿಯ ಸುಸ್ಥಿತಿಯ ತೋರಿದೆವು

ಮೇಲಿನ ನುಡಿಗಳಲ್ಲಿ ಪ್ರಸ್ತುತ ಕೃತಿ ವಿಚಾರದ ವಿವರಣೆಯಿದೆ. ತತ್ತ್ವಾಭಿಮಾನಿಗಳಿಗೆ, ಮೋಕ್ಷಸಾಧಕರಿಗೆ ಮತ್ತು ಜಿಜ್ಞಾಸುಗಳಿಗೆ ಉಪಯುಕ್ತವಾದುದು ಪರಮಾರ್ಥ ಗೀತೆ.

5) ಪರಮಾನುಭವ ಬೋಧೆ: ಸಾಂಗತ್ಯದಲ್ಲಿ ರಚಿತವಾದ ಕೃತಿ. ದೇಶೀಯ ಹಾಡುಗಬ್ಬ. ಬೃಹದಾರಣ್ಯಕೋಪನಿಷತ್ತಿನಲ್ಲಿ ಬರುವ ಯಾಜ್ಞವಲ್ಕ್ಯ ಮತ್ತು ಮೈತ್ರೇಯಿಯರ ಸಂಭಾಷಣೆಯ ರೂಪವಾದ ಅದ್ವೈತ ಸಿದ್ಧಾಂತವಾಗಿದೆ. ಪತ್ನಿ ಮೈತ್ರೇಯಿಯ ಪ್ರಾರ್ಥನೆಯಂತೆ ಪತಿ ಯಾಜ್ಞವಲ್ಕ್ಯನು 'ನಿಜಸತಿ ತನ್ನ ನಿಲವಪ್ಪಯಾತ್ಮ

ನೆಂದರಿವಂತೆ ನಲಿಸು ಬೋಧಿಸಿದ ಅದ್ವೈತ ವಿಚಾರ'ವನ್ನು ಹೃದಯಂಗಮವಾಗಿ ಹೇಳಲಾಗಿದೆ. ಈ ಕೃತಿಯಲ್ಲಿ 6 ಸಂಧಿಗಳೂ 122 ಸೂತ್ರಗಳೂ 925 ಪದ್ಯಗಳೂ ಇವೆ. ಬ್ರಹ್ಮಸೃಷ್ಟಿಯಾದ ಈ ಜಗತ್ತು ಅಧಿಷ್ಠಾನ ತತ್ತ್ವ ಸಾಕ್ಷಾತ್ಕಾರದಿಂದ ಬಾಧಿತವಾಗುವುದು. ಅದ್ವೈತ ಜ್ಞಾನವನ್ನು ಸಂಪಾದಿಸಲು ಸಗುಣೋಪಾಸನೆ ನಿರ್ಗುಣೋ-ಪಾಸನೆಗಳ ಅವಶ್ಯಕತೆಯನ್ನು ತಿಳಿಸಿ, ಕೊನೆಗೆ ತತ್ತ್ವಮಸಿ ಮಹಾವಾಕ್ಯಾರ್ಥವನ್ನು ಭಾಗ-ತ್ಯಾಗ ಲಕ್ಷಣೆ ಅಥವಾ ಜಹದಜಹಲ್ಲಕ್ಷಣೆಯಿಂದ ಪ್ರತಿಪಾದಿಸಿ ತನ್ನ ಪತ್ನಿಯಾದ ಮೈತ್ರೇಯಿಯನ್ನು ಕೃತಾರ್ಥಗಳನ್ನಾಗಿಸಿದ್ದಾರೆ ಯಾಜ್ಞವಲ್ಕ್ಯರು. ಪ್ರಸ್ತುತ ಕೃತಿ ಮುಮುಕ್ಷುಗಳಿಗೆಲ್ಲ ಆದರಣೀಯವಾಗಿದೆ.

6) ಪಾರಮಾರ್ಥ ಪ್ರಕಾಶಿಕೆ: ಇದು ಶ್ರೀ ಚೆನ್ನ ಸದಾಶಿವಯೋಗಿಯ ಸಂಸ್ಕೃತಗ್ರಂಥ 'ಶಿವ ಯೋಗ ಪ್ರದೀಪಿಕೆ' ಎಂಬ ಶ್ಲೋಕಮಯ ಯೋಗ ಶಾಸ್ತ್ರದ ಕನ್ನಡ ಅನುವಾದ ಗ್ರಂಥ. ಇದು ಕನ್ನಡದ ಮೊತ್ತಮೊದಲನೆಯ ಯೋಗಗ್ರಂಥ. ಇದರಲ್ಲಿ ಐದು ಪರಿಚ್ಛೇದಗಳಿವೆ. ಮೊದಲನೆಯ ಪರಿಚ್ಛೇದದಲ್ಲಿ ಗುರು ಶಿಷ್ಯನಿಗೆ ಮಂತ್ರ, ಲಯ, ಹಠ, ರಾಜಯೋಗಗಳ ಸ್ವರೂಪವನ್ನು ಹೇಳಿ, ಈ ಎಲ್ಲ ಯೋಗಗಳಿಗಿಂತ ಕೈವಲ್ಯಫಲವನ್ನು ನೀಡುವ ಶಿವಯೋಗವೇ ಶ್ರೇಷ್ಠವೆಂದು ಹೇಳುವ ಸಂಗತಿಯಿದೆ. ಎರಡನೆಯದಲ್ಲಿ ಶಿವಯೋಗಸಾಧನವಾದ ಹಠಯೋಗದ ವಿಚಾರವನ್ನು ಬೋಧಿಸಿ, ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಯೆಂಬ ಎಂಟು ಅಂಗಗಳುಳ್ಳ ಹಠಯೋಗದ ಅಭ್ಯಾಸವನ್ನು ಗುರುಮುಖೇಣ ತಿಳಿದು ಸಾಧನೆ ಮಾಡುವುದರಿಂದ ಸಾಧಕನ ದೇಹ ಮನಗಳು ಪರಿಶುದ್ಧವಾಗುವುವು ಎಂಬುದನ್ನು ತಿಳಿಸಿಕೊಡಲಾಗಿದೆ. ಮೂರನೆಯದರಲ್ಲಿ ಪ್ರತ್ಯಾಹಾರಾದಿ ಅಂತರಂಗಗಳಿಂದ ಅಂತಃಪೂಜೆಯ ವಿಧಾನವನ್ನು ರಹಸ್ಯವಾಗಿ ಹೇಳಿದ್ದಾರೆ. ನಾಲ್ಕನೆಯದರಲ್ಲಿ ತಾರಕ ರೂಪ ರಾಜಯೋಗದ ವಿವರಣೆಯಿದೆ. ಅದಕ್ಕೆ ಸಾಧನವಾದ ಜ್ಞಾನಾತ್ಮಕ ಯಮಾದಿ ಅಷ್ಟಾಂಗ ಯೋಗದ ರಹಸ್ಯ ವಿವೇಚನೆಯೂ ಉಂಟು. ಇದು ನಿಜಗುಣರ ಯೋಗವಿಜ್ಞತೆಯನ್ನು ತೋರಿಸುತ್ತದೆ. ಐದನೆಯ ಪರಿಚ್ಛೇದದಲ್ಲಿ ತಾರಕಯೋಗಸಿದ್ಧಿಗೆ ಸಾಧನಗಳಾದ ಅಂತರ್ಲಕ್ಷ್ಯ ಶಾಂಭವೀ ಮುದ್ರೆ ಮುಂತಾದ ಬಹುವಿಧ ಯೋಗೋಪಾಯಗಳ ಕುರುಹನ್ನು ಗುರು ಶಿಷ್ಯನಿಗೆ ನಿರೂಪಿಸುವ ಸಂಗತಿಯಿದೆ.

ಹೀಗೆ ಶಿವಯೋಗ ಪ್ರದೀಪಿಕೆಯ ಸಮ್ಯಗನುಭವ ಗ್ರಂಥಾನ್ವಯ ತಾತ್ಪರ್ಯಗಳನ್ನು ಕನ್ನಡಿಸಿ ಕರತಲಾಮಲಕವಾಗಿ ಹೇಳಿರುವ ಪಾರಮಾರ್ಥ ಪ್ರಕಾಶಿಕೆ ಎಂಬ ಪ್ರಕರಣವನ್ನು ಸಾಧುಜನಗಳು–ಅನ್ಯಶಾಸ್ತ್ರಗಳಲ್ಲಿ ಆಯಾಸಗೊಳ್ಳದೆ ಶ್ರದ್ಧಾಭಕ್ತಿಪುರಸ್ಸರವಾಗಿ ಗುರುಮುಖದಿಂದ ತಿಳಿದು ಕೃತಾರ್ಥರಾಗಲೆಂದು ನಿಜಗುಣರು ಹೇಳಿದ್ದಾರೆ.

7) ವಿವೇಕ ಚಿಂತಾಮಣಿ: ನಿಜಗುಣರ ಮೇರುಕೃತಿಯಿದು. ಅವರ ಕೃತಿರತ್ನ ಮಾಲಿಕೆಯ ಚೂಡಾರತ್ನ. ಸಕಲ ವಿಷಯಾಮೃತಸಾಗರ. ವಿಶ್ವವಿಷಯಗಳ ಸುಸ್ಥಿತಿಯನ್ನು ಬಹುವಿಸ್ತಾರವಾಗಿ ಕ್ರಮವರಿತು ವರ್ಣಿಸುವ ಈ ಕೃತಿ ಕನ್ನಡ ಸಾಹಿತ್ಯದ ಮೊತ್ತ ಮೊದಲನೆಯ ವಿಶ್ವಕೋಶ. ಗದ್ಯದಲ್ಲಿರುವ ಈ ಕೃತಿಯಲ್ಲಿ 10 ಪ್ರಕರಣಗಳಿದ್ದು 765 ವಿಷಯಗಳು ಸಂಗ್ರಹಿತವಾಗಿವೆ. ಪ್ರಕರಣಗಳು: 1) ಕೈವಲ್ಯೋಪಾಯ ಕಥನ – ಸಕಲ ಶಾಸ್ತ್ರಾರ್ಥಗಳ ನಿರ್ಣಯವು ನಿರೂಪಿತವಾಗಿದೆ, 2) ಶಿವಸಿದ್ಧಾಂತ ತತ್ತ್ವಕಥನ – ಶಿವಸಿದ್ಧಾಂತ ಪದ್ಧತಿಯನ್ನು ನಿರೂಪಿಸುವ ಸಕಲ ಶೈವಾಗಮಗಳ ಸಾರಸರ್ವಸ್ವವಿದೆ, 3) ಬ್ರಹ್ಮಾಂಡಾಧೋವಿಸ್ತಾರ ಕಥನ – ಸಮಸ್ತ ಬ್ರಹ್ಮಾಂಡದ ಹಾಗೂ ನರಕಗಳ ವರ್ಣನೆಯಿದೆ, 4) ಜಂಬೂದ್ವೀಪ ಕಥನ–ಭೂಲೋಕದ ವರ್ಣನೆ, 5) ಸಪ್ತದ್ವೀಪ ವರ್ಣನೆ – ಸಪ್ತದ್ವೀಪಗಳ ವಿವರಣೆಯೊಂದಿಗೆ ಭೂಲೋಕದ ಮಹತ್ವವನ್ನು ಹೇಳಲಾಗಿದೆ, 6) ದೇವಲೋಕ ಸ್ಥಿತಿ ವರ್ಣನೆ – ಊರ್ಧ್ವ ಲೋಕಗಳ ವಿಷಯವನ್ನು ಹೇಳಲಾಗಿದೆ, 7) ಪೃಥಿವ್ಯಾದಿ ತತ್ತ್ವವರ್ಣನೆ – ಪೃಥಿವ್ಯಾದಿ ತತ್ತ್ವಗಳ ತಾತ್ವಿಕ ವಿವೇಚನೆಯಿದೆ; 8) ಶುದ್ಧ ಭುವನಸ್ಥಿತಿ ವರ್ಣನೆ – ವಿದ್ಯಾದಿ ತತ್ತ್ವಗಳ ವಿವೇಚನೆ, 9) ಭುವನಾಂತರ ಪ್ರಾಪ್ತಿ ಪ್ರಕಾರ ವರ್ಣನೆ – ಜನನ ಮರಣ, ಜನ್ಮಾಂತರಗಳನ್ನು ಹೇಳಲಾಗಿದೆ ಹಾಗೂ ಷಟ್‌ಸ್ಥಲ ಜ್ಞಾನಿಗೆ ಅವಿರಳ ಶಿವೈಕ್ಯವು ಸಿದ್ಧಿಸುವುದೆಂಬ ವಿಚಾರ ನಿರೂಪಿತವಾಗಿದೆ. 10) ಕಾಲಕ್ರಮ ವರ್ಣನೆ–ಕಾಲಸ್ವರೂಪ, ಬ್ರಹ್ಮಾದಿಗಳ ಪರಿಮಿತಿ, ಮಹಾಸಂಹಾರ ಕ್ರಮ, ಶಾಸ್ತ್ರಶ್ರವಣ ಫಲಗಳನ್ನು ನಿರೂಪಿಸಿ ಗ್ರಂಥ ಪರಿಸಮಾಪ್ತಿಯನ್ನು ಮಾಡಿದ್ದಾರೆ. 'ಗಣಿಸಲ್ ವಿವೇಕ ಚಿಂತಾಮಣಿಯೊಳೆ ಗ್ರಂಥಂಗಳಾರು ಸಾಸಿರಮಕ್ಕುಂ" – ಆರು ಸಾವಿರ ಗ್ರಂಥಗಳಿಂದ ನಾನಾ ವಿಷಯಗಳನ್ನು ಸಂಗ್ರಹಿಸಿ ಈ ಕೃತಿಯನ್ನು (ವಿಶ್ವಕೋಶ) ಸಿದ್ಧಗೊಳಿಸಲಾಗಿದೆ– ಎಂಬ ಸಾಲುಗಳು ಎಂಥವರನ್ನೂ ಬೆರಗುಗೊಳಿಸುವಂಥವು.

ಈ ಕೃತಿಯಿಂದ ಭಾರತೀಯ ಜೀವನದರ್ಶನವನ್ನು ಸಮಗ್ರವಾಗಿ ಅರಿಯಬಹುದು. ಇದರಲ್ಲಿ ಧರ್ಮದರ್ಶನಗಳ ಸ್ಪಷ್ಟ ವಿವೇಚನೆ ನಡೆದಿದೆ. ಸಂಸ್ಕೃತ ಗ್ರಂಥಗಳನ್ನು ಅರ್ಥ ಮಾಡಿಕೊಳ್ಳಲು ಕಷ್ಟವಾದಾಗ ಪ್ರಸ್ತುತ ಕೃತಿ ಅರ್ಥಕೋಶದಂತೆ ಸಹಾಯಕವಾಗುವುದು. ಅತ್ಯಂತ ಉಪಯುಕ್ತವಾದ ಈ ಗ್ರಂಥವನ್ನು ಶಾಂತಲಿಂಗ ಶಿವಯೋಗಿ (16ನೆಯ ಶತಮಾನ) ಮರಾಠಿಗೂ, 'ಮಹಾಕವಿ ಶಿವಪ್ರಕಾಶಸ್ವಾಮಿ (17ನೆಯ ಶತಮಾನ) ತಮಿಳಿಗೂ, ಲಿಂಗರಾಜ (18ನೆಯ ಶತಮಾನ) ಸಂಸ್ಕೃತಕ್ಕೂ ಭಾಷಾಂತರಿಸಿದ್ದಾರೆ. ಸಂಸ್ಕೃತದಲ್ಲಿ ಶಿವತತ್ತ್ವ ರತ್ನಾಕರವೆಂಬ ವಿಶ್ವಕೋಶ ರಚಿಸಿದ ಕೆಳದಿಯ ಬಸವರಾಜ (18ನೆಯ ಶತಮಾನ) ಈ ಗ್ರಂಥದ ಸಹಾಯ ಪಡೆದಿದ್ದನೆಂದು ತಿಳಿಯಬರುತ್ತದೆ.

ನಿಜಗುಣರ ಕೃತಿಗಳು ಕನ್ನಡ ಸಾಹಿತ್ಯ ಪ್ರಪಂಚದ ಅತ್ಯಂತ ವೈಶಿಷ್ಟ್ಯಪೂರ್ಣ ಕೃತಿಗಳು. ತಾತ್ತ್ವಿಕ ವಿಚಾರಗಳನ್ನು ಸರಳವಾದ ಸುಲಭವಾದ ರೀತಿಯಲ್ಲಿ ನಿರೂಪಿಸುವುದು ಎಲ್ಲರಿಗೂ ಸಾಧ್ಯವಿಲ್ಲ. ಈ ವಿಷಯದಲ್ಲಿ ನಿಜಗುಣರು ಮಹಾಸಿದ್ಧಿಯನ್ನು ಪಡೆದವರು. ಅವರು ಕೇವಲ ಕವಿಗಳಲ್ಲ, ಮಹಾಶಿವಯೋಗಿಗಳು. ಆದುದರಿಂದಲೇ ಅವರ ಕೃತಿಗಳಲ್ಲಿ ಸಾಹಿತ್ಯ ಸೌಂದರ್ಯ, ಸಂಗೀತ ಮಾಧುರ್ಯ ಹಾಗೂ ಶಾಸ್ತ್ರಗಾಂಭೀರ್ಯ ಮೇಳೈಸಿವೆ. ಅವರು ನೀಡಿರುವ ದೃಷ್ಟಾಂತಗಳು ಪರಿಣಾಮಕಾರಿಯಾದಂಥವು. ಮನಸ್ಸಿನಾಳಕ್ಕೆ ಇಳಿದು ಸಂಸ್ಕಾರವನ್ನೊದಗಿಸುವಂಥವು. ಅವರ ಕೆಲವು ನುಡಿರತ್ನಗಳಿವು: 1) ನರಜನ್ಮದಿಂದಿಹದೊಳು ಮಿಗಿಲುಂಟೇ ? 2) ರಾಗದಿಂ ಬೇರಿನ್ನು ಭವಬೀಜಮುಂಟೇ ? 3) ಕರುಣದಿಂದತಿಶಯವಹ ಧರ್ಮಮುಂಟೇ ? 4) ಅಪವಾದದಿಂ ಮರಣಮಿನ್ನುಂಟೇ ? 5) ದುರಿತಕರ್ಮವ ನೊಲ್ಲದಿರು, ನಿಂದಿಸಿ ನುಡಿಯದಿರಾರನು 6) ಚಿಂತಿಸದಿರು–ಸುಖದುಃಖದೆಡೆಯೊಳು 7) ಮತಿಗೆ ಮಂಗಳವಾವುದು ? – ಉತ್ತಮಸಂಗ 8) ಎಲ್ಲರೊಡನೆ ವೈರವಿಲ್ಲದೆ ಕೂರ್ಪುದೆ ಚಂದಮಾಮ, 9) ಜೀವನವೆರಸಿದ ಮರಣವಾವುದು ? – ಚಿಂತೆ, 10) ಕಿಂಕರವೃತ್ತಿ ಯಾವುದು ?–ತನಗಳಿಯಾಸೆ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5–00 ಪ್ರಾ 5–30 | ಪ್ರಾ 5–00 ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 ಪ್ರಾ 6–00 | ಪ್ರಾ 5–30 ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 ಪ್ರಾ 6–30 | ಪ್ರಾ 6–00 ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 ಪ್ರಾ 7–00 | ಪ್ರಾ 6–30 ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 ಪ್ರಾ 7–30 | ಪ್ರಾ 7–00 ಪ್ರಾ 7–30 |
| ಸರ್ವದರ್ಶನ | ಪ್ರಾ 7–30 ಪ್ರಾ 10–00 | *ಅಭಿಷೇಕ ಪ್ರಾ 7–30 ಪ್ರಾ 8–30 |
| | | ಸಮರ್ಪಣ ಪ್ರಾ 8–30 ಪ್ರಾ 9–30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10–00 ಪ್ರಾ 10–30 | ಪ್ರಾ 9–30 ಪ್ರಾ 10–30 |
| *ಅರ್ಜಿತ ಕಲ್ಯಾಣೋತ್ಸವ | | ಪ್ರಾ 10–30 ಮ 12–00 |
| ಸರ್ವದರ್ಶನ | ಪ್ರಾ 10–30 ಸಂ 6–30 | ಪ್ರಾ 10–30 ಸಂ 6–30 |
| ರಾತ್ರಿ ಕೈಂಕರ್ಯ | | |
| ರಾತ್ರಿ ಗಂಟೆ | ಸಂ 6–30 ರಾ 7–00 | ಸಂ 6–30 ರಾ 7–00 |
| ಸರ್ವದರ್ಶನ | ರಾ 7–00 ರಾ 8–45 | ರಾ 7–00 ರಾ 8–45 |
| ಏಕಾಂತ ಸೇವೆ | ರಾ 8–45 ರಾ 9–00 | ರಾ 8–45 ರಾ 9–00 |

| | |
|---|---|
| *ಅರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ಚನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

11) ಎಸೆವ ಜಾಗರಣವಾವುದು? – ಸದ್ವಿವೇಕ
12) ಸುಧಾರಸ ಧಾರೆಯಾವುದು ? – ಮಿಗೆ ಮೃದುವಚನ.

ನಿಜಗುಣ ಶಿವಯೋಗಿಗಳು ಅಗಾಧವಾದ ಪಾಂಡಿತ್ಯ, ಬಹುಮುಖವಾದ ಪ್ರತಿಭೆಯನ್ನು ಪಡೆದಿದ್ದ ಮಹಾಪುರುಷರು. ವಿದ್ವತ್ತಿನಲ್ಲಿ, ಶಿವಯೋಗದಲ್ಲಿ ಅವರನ್ನು ಸರಿಗಟ್ಟುವವರು ಬಲು ವಿರಳ. ನಿರ್ಮಲಧಾರಿ ಸದ್ಗುರುವನ್ನು ಮನಸ್ಸಿನಲ್ಲಿರಿಸಿಕೊಂಡು, ಅವರಿವರೆನ್ನದೆ ನಿಜವರಿದವ-ರೆಂಥವರಿಗಾಗಿ ಅಧ್ಯಾತ್ಮ ವಿಜ್ಞಾನವನ್ನು ರಚಿಸಿದ ಮಹಾಮಹಿಮರು ನಿಜಗುಣರು. ಅವರ ತರುವಾಯ ಕೃತಿರಚಿಸಿದ ಪ್ರಸಿದ್ಧ ಮಹಲಿಂಗರಂಗ (ಅನುಭವಾಮೃತ), ಶಾಲ್ಯದ ಅರಸ (ಅನುಭವ ರಸಾಯನ), ಸರ್ವಭೂಷಣ ಶಿವಯೋಗಿ (ಕೈವಲ್ಯ ಕಲ್ಪವಲ್ಲರಿ), ವೇದಾಂತ ಶಿವರಾಮ ಶಾಸ್ತ್ರಿ (ಬ್ರಹ್ಮಾನಂದ ಬೋಧೆ, ವೇದಾಂತ ತತ್ತ್ವಗಳು) ಮೊದಲಾದ ಪಂಡಿತರೆಲ್ಲರೂ ನಿಜಗುಣ ಶಿವಯೋಗಿಗಳ ಪ್ರಭಾವಕ್ಕೊಳಗಾಗಿದ್ದಾರೆ. ಮಹಾಶಿವ ಷಡಕ್ಷರದೇವ (1656) ಅಭಿಮಾನದಿಂದ ಹೇಳಿರುವ ಪದ್ಯವಿದು:

ಸುಜನ ವರನುತ ಪದಸದನ ।
ಸುಜನವರದನತಿಳಿವಾದ ರಸಿಕನ ವಿಳಸ ॥
ನಿಜಗುಣಯೋಗಿಯ ನಿರುಪಮ ।
ನಿಜಗುಣಶಿವಯೋಗಿಯ ಪದಾಬ್ಜ
ಕಾನತನಪ್ಪೆಂ ॥

–(ರಾಜಶೇಖರ ವಿಲಾಸ, ಆಶ್ವಾಸ 1, ಪದ್ಯ 16)

★

# ಅಮೃತಾಪುರದ ಅಮೃತೇಶ್ವರ

"ಹೇಗೂ ಬೇಲೂರಿಗೆ ಬಂದಿದ್ದೀರಿ, ಇಲ್ಲೇ ತರೀಕೆರೆಯ ಪಕ್ಕದಲ್ಲಿರುವ ಅಮೃತಾಪುರಕ್ಕೆ ನೀವೇಕೆ ಹೋಗಬಾರದು? ಅಲ್ಲೊಂದು ಪ್ರಾಚೀನ ಸುಂದರ ದೇವಸ್ಥಾನವಿದೆಯಂತೆ". ಎಲ್ಲಾದರೂ ಹೋದಲ್ಲಿ, ನೋಡಬೇಕಾದ ತಾಣವಿದೆಯೇ? ಎಂದು ಪರಿಚಿತರಲ್ಲಿ ಕೇಳುವ ಹವ್ಯಾಸ. ಅದಕ್ಕೆ ಆತ್ಮೀಯರೊಬ್ಬರಿಂದ ಬಂದ ಉತ್ತರವಿದು. ಹೆಚ್ಚಿನವರು ತಾವಾಯಿತು ತಮ್ಮ ಕೆಲಸವಾಯಿತು, ಸುತ್ತಮುತ್ತ ಏನಿದೆ ಏನಾಗುತ್ತಿದೆ ಎಂದು ತಲೆಕೆಡಿಸಿಕೊಳ್ಳುವವರಲ್ಲ. ಆದರೂ ಅಂತಹದರ ಬಗೆಗೆ ಆಸಕ್ತಿ ಇರುವವರು ಅಪರೂಪದಲ್ಲಿ ಒಬ್ಬೊಬ್ಬರಿರುತ್ತಾರೆ. ಮೇಲಿನ ಉತ್ತರ ದೊರಕಿದೊಡನೆ ನಮ್ಮ ಉತ್ಸಾಹಕ್ಕೆ ಗರಿಮೂಡಿತು. ಮರುದಿನ ಬೆಳಗ್ಗೆ ಎದ್ದು ತಿಂಡಿತೀರ್ಥ ತೆಕ್ಕೊಂಡು ಚೀಲದಲ್ಲಿ ತುರುಕಿ ತರೀಕೆರೆಗೆ: ಅಲ್ಲಿಂದ ಸೋಮೇಶ್ವರ ಬಸ್ಸಿನಲ್ಲಿ ಹತ್ತು ಕಿಲೋಮೀಟರು ದೂರದ ಅಮೃತಾಪುರಕ್ಕೆ ಬಂದೇ ಬಿಟ್ಟೆವೆಂಬ ಉತ್ಸಾಹದಲ್ಲಿ ಜನರ ತಿಕ್ಕಾಟದ ಸುಸ್ತು ಮರೆಯಾಗಿತ್ತು. ಗಲೀಜು, ದನಗಳ ಗಂಜಳ ತುಂಬಿದ ಹತ್ತಾರು ಮನೆಗಳ ಮಧ್ಯದಲ್ಲಿ ದೇವಸ್ಥಾನದ ಹಿಂಭಾಗವನ್ನು ತಲಪಿದೆವು. ಶುಭಸೂಚನೆಯೋ ಎಂಬಂತೆ ಪಿರಿಪಿರಿ ಮಳೆ ಬೇರೆ. ದೂರದಲ್ಲಿ ಬಿಳಿ ವೇಷಧಾರಿ ಗೈಡು ಹತ್ತಿರಕ್ಕೆ ಬಂದು ವಿಚಾರಿಸಿದಾಗ ಮುಖದಲ್ಲಿ ನಗೆ ಮಿಂಚಿತ್ತು.

ದೇವಸ್ಥಾನದ ಹೊರಗೋಡೆಯ ಶಿಲ್ಪ ಸೌಂದರ್ಯ ಕಣ್ಣಿಗೆ ಬಿದ್ದಾಗ ಬಂದದ್ದು ಸಾರ್ಥಕವೆನಿಸಿತು. ನಕ್ಷತ್ರಾಕಾರದ ಪಂಚಾಂಗದ ಮೇಲೆ ಹೆಚ್ಚು ಎತ್ತರವಿಲ್ಲದ, ಕಲೆಯ ಕುಸುರಿಬಲೆ ನೆಯ್ದಿರುವ ಈ ದೇವಸ್ಥಾನ ಬೇಲೂರು ಹಳೆಬೀಡುಗಳಂತೆ ಹೊಯ್ಸಳ ಶಿಲ್ಪಕ್ಕೆ ಶ್ರೇಷ್ಠಮಾದರಿ. ಮುರಿದು ಬಿದ್ದ ಕಗ್ಗಲ್ಲಿನ ಪ್ರಾಕಾರಕ್ಕೆ ತೇಪೆ ಮಾಡಲಾಗಿದೆ. ಬಡಗು ದಿಕ್ಕಿನ ಪ್ರಾಕಾರದ ಸಂಕ್ರಾಂತಿ ಮಂಟಪ, ಬಲಭಾಗದಲ್ಲಿರುವ ಶಾರದಾ ದೇವಾಲಯ ಸಂಪೂರ್ಣ ಭಗ್ನವಾಗಿಯೂ ಪ್ರಾಚೀನ ವೈಭವದ ಕರುಣ ಕಥೆಯನ್ನು ಹೇಳಿ ಕಣ್ಣೀರಿಳಿಸುವ ಮೂಕಸಾಕ್ಷಿಗಳಾಗಿವೆ. ಶಾರದೆ ತನ್ನ ತಲೆಯ ಮೇಲೆ ಮುರಿದು ಬಿದ್ದ ಸೂರಿನಡಿಯಿಂದ ತಪ್ಪಿಸಿಕೊಂಡು ಅಮೃತೇಶ್ವರನ ಆಶ್ರಯದಲ್ಲಿ ನೆಲೆಸಿದ್ದಾಳೆ.

ಕರ್ನಾಟಕವನ್ನಾಳಿದ ಪ್ರಸಿದ್ಧ ಅರಸುಮನೆತನಗಳಲ್ಲಿ ಹೊಯ್ಸಳರದೂ ಒಂದು. ಈ ವಂಶದ ಪ್ರಸಿದ್ಧ ದೊರೆ ಬಿಟ್ಟಿದೇವ, ವಿಷ್ಣುವರ್ಧನ, ಅವನ ಮೊಮ್ಮಗ ಎರಡನೆಯ ವೀರಬಲ್ಲಾಳ ಕ್ರಿ. ಶ 1196 ರಲ್ಲಿ ವೈಭವದಿಂದ ಕರ್ನಾಟಕವನ್ನಾಳಿದ ದೊರೆ. ಇವನ ಆಸ್ಥಾನದಲ್ಲಿ "ನಿಂದಿರೆ ದಂಡಾಧೀಶಂ ಕುಳ್ಳಿರೆ ಮಂತ್ರಿ ತೊಡಂಕೆ ಕವಿ ಜನಾರ್ದನದೇವಂ" ಎಂದು ರಾಜನಿಗೆ ಎಲ್ಲವೂ ಆಗಿದ್ದ, ಕವಿ ಚಕ್ರವರ್ತಿ ಜನ್ನನಿದ್ದ. ಯಶೋಧರ ಚರಿತೆ, ಅನಂತನಾಥ ಪುರಾಣಗಳೆಂಬ ಉತ್ತಮ ಕೃತಿಗಳನ್ನು ರಚಿಸಿ, ದಾನ ಧರ್ಮಾದಿಗಳನ್ನು ಮಾಡಿ ಬಸದಿಕಟ್ಟಿಸಿ ಶಾಸನಗಳನ್ನು ಬರೆಸಿ ಪ್ರಸಿದ್ಧನಾದ ಈ ಜೈನ ಕವಿಯ ತಂದೆ ಹೊಯ್ಸಳವೀರ ಬಲ್ಲಾಳನ ತಂದೆ ನರಸಿಂಹ ಬಲ್ಲಾಳನಲ್ಲಿ ಕಟಕೋಪಾಧ್ಯಾಯನಾಗಿದ್ದ ಶಂಕರ ಕವಿ, ಕವಿಸುಮನೋಬಾಣನೆಂಬ ಬಿರುದಿನ "ಸೂಕ್ತಿಸುಧಾರ್ಣವ"ದ ಕರ್ತೃ. ಜನ್ನ ಕವಿ ಬರೆಸಿದ ಶಾಸನಗಳಲ್ಲೊಂದು ಈ ದೇವಸ್ಥಾನದ ಹಿಂದು ಪಕ್ಕದಲ್ಲಿದೆ. ಸುಮಾರು ಹತ್ತು ಅಡಿಯಷ್ಟು ಎತ್ತರದ ಮೂರು ನಾಲ್ಕು ಅಡಿ ಅಗಲದ ಶಿಲೆಯಲ್ಲಿ ಮುದ್ದಾಗಿ ಬರೆದ ಬರಹ ಇಂದಿಗೂ ಓದುವಂತೆ ಸ್ಪಷ್ಟವಾಗಿದೆ. ನವರಂಗವನ್ನು ಪ್ರವೇಶಿಸುವ ದ್ವಾರದ ಇಕ್ಕೆಲಗಳಲ್ಲಿ ಸುಂದರವಾಗಿ ಬರೆದ ಶಾಸನಗಳಿವೆ. ಜನ್ನನ ಶಾಸನವನ್ನು ಕೇಳಿದ್ದೆವು, ಕಂಡಿರಲಿಲ್ಲ. ಕಂಡಾಗ ಜನ್ನನನ್ನೇ ಕಂಡಷ್ಟು ಆನಂದ. ಸುಮಾರು ಎಂಟುನೂರು ವರ್ಷ ಬಾಳಿಯೂ ಕುಂದದ ಈ ಬರಹ, ಈ ದೇವಸ್ಥಾನದ ಶಿಲ್ಪ ಅಚ್ಚರಿ ಹುಟ್ಟಿಸುತ್ತದೆ. ಕ್ರಿ. ಶ. 1310–11 ರಲ್ಲಿ ಅಲ್ಲಾವುದ್ದೀನ ಖಿಲ್ಜಿಯ ದಂಡನಾಯಕ ಮಲ್ಲಿಕಾಫರನು ಇಲ್ಲಿಗೆ ಧಾಳಿ ಮಾಡಿದ್ದನಂತೆ. ಜನಸಂಪರ್ಕದಿಂದ ದೂರವಾದ ಈ ಹಳ್ಳಿಯಲ್ಲಿ ಅಳಿದುಳಿದ ಈ ಕಲೆಯ ನೆಲೆ ಸ್ವದೇಶೀಯರಿಗಿಂತ ಹೆಚ್ಚು ವಿದೇಶೀಯರನ್ನು ಆಕರ್ಷಿಸುತ್ತದೆಂದು ಸ್ಥಳೀಯರ ಹೇಳಿಕೆ.

ಮೂಡುಮುಖವಾಗಿ ನಿಂತಿರುವ ದೇವಾಲಯದ ಮಹಾದ್ವಾರದಿಂದ ಒಳಹೊಕ್ಕರೆ, ಮುಖಮಂಟಪದ ಬಲಭಾಗದಲ್ಲಿ ಚಿಕ್ಕದೊಂದು ವೀರಗಲ್ಲು ತಲೆಯೆತ್ತಿ ಸ್ವಾಗತಿಸುತ್ತದೆ. ದೇವಾಲಯದ ಹೆಚ್ಚಿನ ಭಾಗವೆಲ್ಲ ಬಳಪದ ಕಲ್ಲು, ಮೆದುವಾದ್ದರಿಂದ ಇದರಲ್ಲಿ ಕುಸುರಿಕಲೆ ಸುಲಭ. ನಕ್ಷತ್ರಾಕಾರದ ನೆಲಗಟ್ಟಿನಲ್ಲಿ ಮುಖಮಂಟಪ, ನವರಂಗ, ಶುಕನಾಸಿ, ಗರ್ಭಗುಡಿ – ಇದು ಹೊಯ್ಸಳರ ದೇವಸ್ಥಾನಗಳ ರೀತಿ. ಮುಖಮಂಟಪದ ಚಾವಣಿಯನ್ನು ಹಲವಾರು ಕಂಬಗಳು ಎತ್ತಿಹಿಡಿದಿವೆ. ಕರಿಕಲ್ಲಿನ ಪ್ರತಿ ಕಂಬವೂ ಸಾಣೆಹಿಡಿದು ಕನ್ನಡಿಯಂತೆ ಹೊಳಪು. ವೃತ್ತಾಕೃತಿಯ ಐದು ತುಂಡುಗಳ ಜೋಡಣೆಯಾದರೂ ಸಾದು ಕಾಣದು. ಇಂತಹ ಐವತ್ತೆರಡು ಕಂಬಗಳು, ಶಿಲ್ಪಕಲಾಮಯವಾದ ಇಪ್ಪತ್ತಾರು ಭುವನೇಶ್ವರಿಗಳು ಮುಖಮಂಟಪದ ಕಲಾ ಕೋಶಗಳು. ಭುವನೇಶ್ವರಿ ಒಂದರಂತೆ ಇನ್ನೊಂದಿಲ್ಲದಷ್ಟು ವೈವಿಧ್ಯಮಯ, ರಚಿಸಿದ ಶಿಲ್ಪಿಗಳ ಹೆಸರು ಮಲ್ಲಿತಮ್ಮ-ಕನ್ನಡ ಲಿಪಿಯಲ್ಲಿ, ರಾವೋಜ, ದಾಸೋಜ – ನಾಗರಿಯಲ್ಲಿ ಬರೆದಿವೆ. ಒಳಭಾಗದ ಸುತ್ತಲೂ ಗೋಡೆಗೆ ತಾಗಿ ಸೀಟು ಕಲ್ಲು, ಒರಗು ಕಲ್ಲು, ಅಷ್ಟೇ ಎತ್ತರ ಗೋಡೆ

**ಡಾ॥ ಯು॥ ರಾಮಭಟ್ಟ**

ಮೇಲ್ಛಾವಣಿಗೆ ತಾಗುವಷ್ಟಿಲ್ಲ. ಮಾಡಿನ ಚಾವಣಿಯಿಂದ ಅಲ್ಲಲ್ಲಿ ನೀರು ತೊಟ್ಟಿಕ್ಕುತ್ತದೆ. ಬದಿಗಳು ಸಡಿಲಾದ್ದರಿಂದ ಕುಸಿಯದಂತೆ ಕಲ್ಲ ಕಂಬಗಳ ಮೂಂಡು ಕೊಡಲಾಗಿದೆ. ಗೋಡೆಯ ಹೊರಭಾಗವೆಲ್ಲ ಕಲಾಮಯ. ಎಡಭಾಗವೆಲ್ಲ ಶ್ರೀಕೃಷ್ಣನ ಬಾಲ ಲೀಲೆ, ಮಹಾಭಾರತ ಕಥೆಗಳ ಸಾಕಾರ ಚಿತ್ರ. ಬಲಭಾಗವೆಲ್ಲ ರಾಮಾಯಣಕ್ಕೆ ಮೀಸಲು. ಮಹಾಭಾರತದ ಅರಗಿನ ಮನೆ ಸುಡವ ದೃಶ್ಯ ಎದ್ದು ತೋರುತ್ತದೆ. ಕಾಳಿಯ ಮರ್ದನವೋ, ನೆಲುವಿನಿಂದ ಮೊಸರು ಕುಡಿಯುವುದೋ, ಶಿಶುಪಾಲ ವಧವೋ, ಸೀತಾಪಹರಣವೋ, ರಾವಣಸಂಹಾರವೋ ಪುಟ್ಟಗಟ್ಟಲೆ ಬರೆಯ ಬಹುದಾದ ಕತೆ ಇಲ್ಲಿ ನೆಟ್ಟಕಣ್ಣಿಗೆ ಪ್ರತ್ಯಕ್ಷ. ಕುಸುರಿ ಕಲೆಯಿಂದ, ಕೇಳಿದ ಕತೆಗೆ ಇಲ್ಲಿ ಜೀವ ಬಂದಿದೆ. ಮತ್ತೆ ಮತ್ತೆ ನೋಡಬೇಕೆನಿಸುತ್ತದೆ. ಈ ಶಿಲ್ಪ ರಚನೆ ಕಾಲದ ಹೊಡೆತಕ್ಕೆ ಸಿಕ್ಕಿ ಅಲ್ಲಲ್ಲಿ ಕಿತ್ತುಹೋಗಿ ಮಾಸಿದೆ. ನೀರು ಕುಡಿದಂತೆ ಸರಸತೆಯಿಂದ ನಿರರ್ಗಳವಾಗಿ ಅಡುನುಡಿಯಲ್ಲಿ ಸಾಗುವ ಮಾರ್ಗದರ್ಶಕನ ವಿವರಣೆ ಕಲೆಯೊಂದಿಗಿನ ಹೃದಯ ಸಂವಾದಕ್ಕೆ ನೆರವಾಯಿತು. ಈ ಶಿಲ್ಪಕ್ಕೆ ಕಣ್ಣು ತಾಗದಂತೆ ಕಾಮಕಲೆಯ ಚಿತ್ರಗಳನ್ನೂ ಅಲ್ಲಲ್ಲಿ ಇರಿಸಿರುವುದನ್ನೂ ಮರೆಮಾಡದೆ ಹೇಳಿದಾಗ ಒಂದಿಗಿದ್ದ ಲಲನೆಯರ ಮುಖದಲ್ಲಿ ನಾಚಿಗೆ ಮಿಂಚಿದರೂ ನಗು ಅರಳಿತ್ತು. ನಮ್ಮೊಂದಿಗಿದ್ದ ಚಿಣ್ಣನಿಗೆ ಮಹಾಭಾರತ ರಾಮಾಯಣಗಳ ಕತೆ ಕಣ್ಣಲ್ಲಿ ಕಂಡಂತೆ ಮನದಟ್ಟಾದರೂ ಇದರ ಗುಟ್ಟು ರಟ್ಟಾಗಿರದೇನೋ.

ಗರ್ಭಗೃಹದ ಸುತ್ತಲೂ ಗೋಡೆಯಲ್ಲಿ ಕೆಳಭಾಗದಲ್ಲಿ ಲತಾಪತ್ರ, ಗೋಪುರಗಳ ಸುಂದರ ಚಿತ್ರಣ. ಸೀರೆಗಳ ಅಂಚುಗಳಿಗೆ ಕಲಾಬತ್ತುಗಳಿಗೆ ಇವೇ ಮಾದರಿ. ಮೇಲ್ಭಾಗದಲ್ಲಿ ಶೈವ ವೈಷ್ಣವ ದೇವತಾ ವಿಗ್ರಹಗಳು. ದರ್ಪಣ ಸುಂದರಿ, ವಿವಿಧ ನಾಟ್ಯಭಂಗಿಗಳು ಗರ್ಭಗುಡಿಯ ಚಾವಣಿಯ ಶಂಖಾಕೃತಿಯ

---

ಜೋಡಿಗೆ. ಅಂಚಿನಲ್ಲಿ ಸಾಲಾಗಿ ಮೇಲಕ್ಕೆ ಸಿಂಹಮುಖಗಳು, ಎದುರಲ್ಲಿ ಹೊಯ್ಸಳ ಲಾಂಛನ–ಸಿಂಹವನ್ನೆದುರಿಸುವ ಶೂರ. ಕಿಕ್ಕಿರಿದ ಕಲೆಯ ಕಾಡಿನಲ್ಲಿ ಸಿಲುಕಿದ ಕಣ್ಣನ್ನು ಕೀಳುವುದೆಂತು?

ಗರ್ಭಗುಡಿಯ ಒಳಗೆ ಮೂರು ಮುಖದ ಸಾಲಿಗ್ರಾಮ ಶಿಲೆಯ ಶಿವಲಿಂಗ ಅಮೃತೇಶ್ವರ–ವೀರ ಬಲ್ಲಾಳನ ದಂಡನಾಯಕ ಅಮೃತನ ಹೆಸರಿನಲ್ಲಿ. ಆದ್ದರಿಂದಲೇ ಊರು ಅಮೃತಾಪುರ. ನವರಂಗದ ಒಳಭಾಗದಲ್ಲಿ ಗೋಡೆಗೆ ತಾಗಿದಂತೆ ಕೆಲವು ಸುಂದರ ವಿಗ್ರಹಗಳು–ನವಿಲಮೇಲೆ ಕುಳಿತ ಸುಬ್ರಹ್ಮಣ್ಯ ಸುಂದರನಾಗಿದ್ದರೂ ನವಿಲಿನ ಮುಖ ನಷ್ಟವಾಗಿದೆ. ಭೈರವನ ವಿಗ್ರಹ ರುದ್ರ ಮನೋಹರ, ಈ ದಿಗಂಬರ ವಿಗ್ರಹಕ್ಕೆ ತಾಗಿರುವ ಇಕ್ಕೆಲದ ಎಲುಬುಗೂಡುಗಳು ನೈಜದಂತಿವೆ. ಮನಮೋಹಕರವಾದ ಶಾರದಾ ವಿಗ್ರಹ ಶೃಂಗೇರಿ ಶಾರದೆಯನ್ನು ಹೋಲುತ್ತದೆ. ಸಂಪೂರ್ಣ ನಷ್ಟವಾದ ಅದರ ಆಲಯದಿಂದ ಅದನ್ನಿಲ್ಲಿ ತಂದಿರಿಸಲಾಗಿದೆ. ಗಣಪತಿ, ಸಪ್ತ ಮಾತೃಕೆಯರೂ ಪಕ್ಕದಲ್ಲೇ ಇದ್ದಾರೆ. ಎದುರಿನಲ್ಲಿರುವ ಕರಿಕಲ್ಲಿನ ನಂದಿ, ಕೊರಳ ಗಂಟೆ, ಸರಪಳಿ ಎದ್ದು ತೋರುತ್ತವೆ, ನೋಡುವವರಿಗೆಲ್ಲಾ ನುಣುಪಾದ ಅದರ ಮೈಯನ್ನು ಸವರಿದರೇ ತೃಪ್ತಿ. ಶೈವ ವೈಷ್ಣವದ ಸಮನ್ವಯದಂತಿದೆ ದೇವಾಲಯದ ಶಿಲ್ಪ. ಎಡಪ್ರಾಕಾರದಲ್ಲಿರುವ ಸಂಕ್ರಾಂತಿ ಮಂಟಪದಲ್ಲಿ ಮಕರ ಸಂಕ್ರಮಣದಂದು ಪೂಜೆ ನಡೆಯುತ್ತಿದ್ದು, ಈಗ ಅದು ತನ್ನ ಅಸ್ತಿತ್ವವನ್ನೇ ಕಳಕೊಳ್ಳುವಲ್ಲಿಗೆ ಬಂದಿದೆ. ಇದಕ್ಕೆ ಸೂಳೆಮಂಟಪ ಎಂಬ ಹೆಸರು ಬಹುಶಃ ದೇವದಾಸಿಯರಿಂದ ಬಂದಿರಬೇಕು. ಅದರ ಎದುರಲ್ಲೇ ಬನ್ನಿಮರ, ತಮ್ಮನ್ನೇ ಬಲಿ ನೀಡಿದವರ ರಚನೆಯಿರುವ ಕಲ್ಲು. ಇಂತಹ ಅಪೂರ್ವ ದೇವಾಲಯಗಳ ಹಿರಿಮೆ ದಂತ ಕಥೆಗಳಿಲ್ಲದಿದ್ದರೆ ಇನ್ನೆಷ್ಟು ಹೆಚ್ಚುವುದೆಂತು? ಈ ಊರವನೊಬ್ಬನ ಎಮ್ಮೆಗಳನ್ನು ಕಳ್ಳರು ಕದ್ದು ಕೊಂಡು ಹೋದಾಗ ಅದು ಈ ಮುಖಮಂಟಪದ ಕಂಬಗಳಲ್ಲಿ ಪ್ರತಿಫಲಿಸಿ ಕಂಡು ಅಣ್ಣ ಗುಡ್ಡೆಯಲ್ಲಿ ಅವರನ್ನು ಹಿಡಿದು ಎಮ್ಮೆಗಳನ್ನು ತರಲಾಯಿತಂತೆ. ಪ್ರತಿಬಿಂಬಿಸುವಷ್ಟು ಕಂಬಗಳು ನುಣುಪಾಗಿರುವುದಂತೂ ನಿಜ.

ಕೆಲವರ್ಷಗಳಿಂದ ಕೇಂದ್ರ ಸರಕಾರದ ಪ್ರಾಕ್ತನ ಇಲಾಖೆಗೊಳಪಟ್ಟ ಈ ದೇವಾಲಯದಲ್ಲಿ ಕೇಂದ್ರದ ನೆರವಿನಿಂದ ಸಾವಿರಾರು ರೂಪಾಯಿ ವೆಚ್ಚದಲ್ಲಿ ವಿದ್ಯುತ್ತಂತಿಗಳನ್ನು ಇತ್ತೀಚೆಗಷ್ಟೇ ಜೋಡಿಸಲಾಗಿದ್ದರೂ ವಿದ್ಯುತ್ತಿನ ಸರಬರಾಜು ಇನ್ನೂ ಆಗದಿರುವುದರಿಂದ ಒಳಭಾಗದ ಸೂಕ್ಷ್ಮ ಕಲಾವೈಭವವನ್ನು ಸವಿಯುವ ಸುಯೋಗವಿರಲಿಲ್ಲ. ಮಾರ್ಗದರ್ಶಕರಿಗೆ ಟಾರ್ಚೂ ಸಿಕ್ಕಲಿಲ್ಲ. ಅರ್ಚಕರು ತೋರಿಸಿದ ಆರತಿಯ ಬೆಳಕಿನಲ್ಲೇ ತೃಪ್ತಿಪಡಬೇಕಾಯಿತು. ಪಕ್ಕದಲ್ಲೇ ಲಕ್ಷಗಟ್ಟಲೆ ವೆಚ್ಚದಲ್ಲಿ ಕಲ್ಯಾಣ ಮಂಟಪವನ್ನು ವಸತಿಯನ್ನೂ ಸ್ಥಾಪಿಸಲು ಮಂತ್ರಿವರ್ಯರು ಶಿಲಾನ್ಯಾಸ ಮಾಡಿದ ಕುರುಹುಗಳು ಉಳಿದಿದ್ದವು. ನಾವು ಹೋದ ದಿನಕ್ಕೆ ಸ್ವಲ್ಪ ಹಿಂದೆ ಕರ್ನಾಟಕದ ಮಂತ್ರಿದ್ವಯರು ಇಲ್ಲಿಗೆ ಭೇಟಿಕೊಟ್ಟು ಆಶ್ವಾಸನೆಯನ್ನೂ ನೀಡಿದ ಸುದ್ದಿತಿಳಿಯಿತು. ದೇವಾಲಯದ ಪುನರುಜ್ಜೀವನ ವಸತಿ ನಿರ್ಮಾಣ ಯಾವಾಗ ಕಾರ್ಯರೂಪಕ್ಕೆ ಬರುತ್ತದೋ ಹೇಳಲಾಗದು.

ಮಧ್ಯಾಹ್ನ ಒಂದೂಕಾಲು ಗಂಟೆಯ ಹೊತ್ತು ಅವಿರತವಾಗಿ ಕಲಾಸ್ವಾದನೆ ಮಾಡಿ ಕಣ್ಮನಗಳ ಹಸಿವಿಂಗಿದರೂ ಹೊಟ್ಟೆಯ ತಾಳ ಮತ್ತೆ ಕೇಳತೊಡಗಿತ್ತು. ಪ್ರಯಾಣಿಕರಿಗಾಗಿದ್ದ ಕೊಳವೆ ಬಾವಿಯ ನೀರಿನೊಂದಿಗೆ ತಂದ ತಿಂಡಿಯಿಂದ ಹೊಟ್ಟೆಯನ್ನು ತಣಿಸಿದ ನಂತರ, ನಮ್ಮೂರು ಉಡುಪಿ ನಮ್ಮನ್ನು ಕರೆಯಿತು. ವಿಶಾಲವಾದ ಹಸಿರು ಹೊಲಗಳ ಮಧ್ಯೆ ಸಾಗುತ್ತಾ ವನದೊಳಗೆ ಪ್ರವೇಶಿಸಿ ಆಗುಂಬೆಯನ್ನಿಳಿದು ಮನೆ ತಲುಪಿದಾಗಲೂ ಅಮೃತೇಶ್ವರನ ನೋಟ ಮನದಲ್ಲಿ ಅಮರವಾಗಿತ್ತು.



## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ಸಂಪಾದಕರು**
ಸಪ್ತಗಿರಿ
ಟಿ. ಟಿ. ಡಿ.
ತಿರುಪತಿ–517501

(8 ನೇ ಪುಟದಿಂದ)

4. ಎರಡನೇ ಬಾಜೀರಾಯನಿಂದ ಶ್ರೀಗಳವರಿಗರ್ಪಿತವಾದ ಕೆಲವು ಹರಳಿನ ವೈಜಯಂತೀಮಾಲೆ.

ಈ ಪದಾರ್ಥಗಳಿಗೆ ಯಾವುದೇ ರೀತಿಯ ಶಾಖವು ತಟ್ಟದೆ ಮೊದಲಿನ ಸ್ಥಿತಿಯಲ್ಲಿಯೇ ಇದ್ದವು.

ಎರಡನೆ ಬಾಜೀರಾಯರಿಂದ ಕೊಡಲ್ಪಟ್ಟ ಮುತ್ತಿನಹಾರ ಹಾಗೂ ಕೆಂಪು ಹರಳಿನ ವೈಜಯಂತೀಹಾರಗಳನ್ನು ಇಂದಿಗೂ ಶ್ರೀ ಮದುತ್ತರಾದಿ ಮಠದಲ್ಲಿರುವ ಶ್ರೀರಾಮ ದೇವರ ಕೊರಳಲ್ಲಿ ನಾವು ಕಾಣಬಹುದು.

ಮುಂದೆ ಕಾಲಾಂತರದಲ್ಲಿ ಈ ಪೀಠದಲ್ಲಿ ವಿರಾಜಮಾನರಾಗಿದ್ದ ಯತಿಗಳ ದರ್ಶನವೂ ಗಂಗಾತೀರದಲ್ಲಿ ಬ್ರಹ್ಮಾವರ್ತದಲ್ಲಿ ವಾಸವಾಗಿದ್ದ ಬಾಜೀರಾಯರಿಗೆ ಲಭಿಸಿತು. (ಕಾಲ 1850) ಅಂದು ಆಂಗ್ಲರ ಆಜ್ಞಾನುಸಾರವಾಗಿ ಬಾಜೀರಾಯನು ಬ್ರಹ್ಮಾವರ್ತದಲ್ಲಿದ್ದಾಗ ಆತನ ಭೇಟಿಗೆ ಯಾರ್‍ಯಾರು ಬಂದು ಹೋದರೆಂಬ ವಿಷಯವು ಇತಿಹಾಸದ ಕಾಗದ ಪತ್ರಗಳಿಂದ ತಿಳಿದುಬರುವುದು. ಈ ಮಾತಿಗೆ ಉದಾಹರಣೆಯಾಗಿ ಕೆಲವರ ಹೆಸರನ್ನಾದರೂ ಇಲ್ಲಿ ಕೊಡುವುದು ಉಚಿತ, 1). ಸರದಾರ ಉಂಜೂರಕರ, 2) ಸಮರ್ಥ ರಾಮದಾಸರ ಮಠದ ಗ್ವಾಲೇರ ಮಠದ ಅಧಿಕಾರಿಗಳಾಗಿದ್ದ ಮನೋಹರ ಆಬಾ. (ಇವರು ಎರಡುಸಲ ಬ್ರಹ್ಮಾವರ್ತಕ್ಕೆ ಬಂದು ಬಾಜೀರಾಯರನ್ನು ಕಂಡು ಹೋಗಿದ್ದಾರೆ. ಈ ಮಾತು ಅವರ ಚರಿತ್ರದಿಂದಲೇ ತಿಳಿದುಬರುವುದು)

ಸತ್ಯಪರಾಯಣರು(ಕಾಲ 1841 ರಿಂದ 1863)

ಶ್ರೀಸತ್ಯಪರಾಯಣರು ಕಾಶಿ ಅಯೋಧ್ಯಾ ಮಥುರಾ, –ಈ ತೀರ್ಥಕ್ಷೇತ್ರಗಳನ್ನು ಸಂದರ್ಶನಮಾಡುತ್ತ ದಿಲ್ಲಿಗೆ ಬಂದು ತಲುಪಿದರು. ದಿಲ್ಲಿಯಲ್ಲಿ ಗೋಪೀಚಂದ ಹಾಗೂ ತುಲಸೀದಾಸ ಎಂಬ ನಾಮಾಂಕಿತರಾದ ಗೃಹಸ್ಥರು ಶ್ರೀಗಳವರಿಗೆ ಬಹುಪರಿಯಾಗಿ ಆದರೋಪಚಾರಗೈದರು. ಅನಂತರ ಶ್ರೀಗಳವರು ಕಾನಪುರಕ್ಕೆಆಗಮಿಸಿದರು.ಆ ಸಮಯದಲ್ಲಿ ಬ್ರಹ್ಮಾವರ್ತದಲ್ಲಿ ಬಿಡಾರಮಾಡಿಕೊಂಡಿದ್ದ ಎರಡನೆ ಬಾಜೀರಾಯನು ತನ್ನ ಆಶ್ರಮದಲ್ಲಿದ್ದ ಪಂಡಿತರನ್ನು ಕಾನಪುರಕ್ಕೆ ಕಳುಹಿಸಿ ಶ್ರೀಗಳವರು ಬ್ರಹ್ಮಾವರ್ತಕ್ಕೆ ಬಂದು ಹೋಗಬೇಕೆಂಬ ಪ್ರಾರ್ಥನೆ ಸಲ್ಲಿಸಿದನು. ಈ ಕಾರ್ಯಕ್ಕಾಗಿ ದಿವಾಣ ಪರಶುರಾಮಭಾವು,ಪಟವರ್ಧನ ಅವರನ್ನು ನಿಯಮಿಸಲಾಗಿತ್ತು, ಶ್ರೀಗಳವರು ತಮ್ಮ ಸಕಲ ಪರಿವಾರ ಸಮೇತರಾಗಿ ಬ್ರಹ್ಮಾವರ್ತಕ್ಕೆ ಆಗಮಿಸಿದರು. ಅವರನ್ನು ವಾಲ್ಮೀಕಿ ಆಶ್ರಮದಲ್ಲಿಳಿಸಲಾಯಿತು. ಶ್ರೀಗಳವರು ಪ್ರಾತಃಕಾಲದಲ್ಲಿ ಗಂಗೆಯಲ್ಲಿ ಸ್ನಾನಮಾಡಿ ಪ್ರಾತಃಕಾಲದ ಪೂಜೆಯನ್ನು ಮುಗಿಸಿಕೊಂಡು ಮಧ್ಯಾಹ್ನದ ಪೂಜೆಗೆಂದು ಬಿಡಾರದತ್ತ ಸಾಗಿದ್ದರು. ಅವರ ಹೆಗಲಮೇಲೆ ಶ್ರೀರಾಮದೇವರ ಪೆಟ್ಟಿಗೆಗಳಿದ್ದವು. ದೂರದಲ್ಲಿ ಸ್ನಾನಕ್ಕಿಳಿದಿದ್ದ ಬಾಜೀರಾಯನು ಈ ದೃಶ್ಯವನ್ನು ಕಂಡ. ಆತ ಲಕ್ಷ್ಮಣಘಾಟದಲ್ಲಿ ಸ್ನಾನಮಾಡುತ್ತಿದ್ದ. ಈ ದೃಶ್ಯದಿಂದ ಆತನಿಗೆ ಬಹು ಅಚ್ಚರಿಯನಿಸಿತು. ಸಮೀಪದಲ್ಲಿದ್ದ ಆಶ್ರಿತರನ್ನು ಕರೆದು

'ಇದೇನು ! ಸನ್ಯಾಸಿಗಳು ಹೀಗೆ ಪಾದಚಾರಿಗಳಾಗಿ ಏಕಾಂಗಿಗಳಾಗಿ ಹೊರಟಿರುವರಲ್ಲ' ಎಂದು ಕೇಳಿದ. ಆಗ ಅವರು ;

"ಮಹಾಪ್ರಭುಗಳೇ ಈ ಉತ್ತರಾದಿ ಮಠದ ಯತಿಗಳು ಮೊದಲಿನಿಂದಲೂ ಮಹಾ ವಿರಕ್ತರು. ಅವರಿಗೆ ಜರತಾರಿ ಅಂಚಿನ ಪಂಚೆಗಳನ್ನು ಕೊಟ್ಟರೂ ಸಹ ಮೊದಲು ಆ ಅಂಚುಗಳನ್ನು ತೆಗೆದು ಹಾಕಿ ಸಾಮಾನ್ಯ ವಸ್ತ್ರಗಳನ್ನು ಧಾರಣಮಾಡುತ್ತಾರೆ, ಇನ್ನು ಸಾಮಾನ್ಯ ಪಂಚೆಗಳನ್ನೂ ಕೂಡ ಹರಿದು ಉಟ್ಟುಕೊಳ್ಳುವ ಸಾಂಪ್ರದಾಯವಿದೆ, ಕೊರಳಲ್ಲಿ ತುಳಸಿಯ ವಿನಾ ಬೇರೆಯಾವ ಯಾವುದನ್ನು ಧರಿಸುವುದಿಲ್ಲ, ಉತ್ಸವಾದಿಗಳಲ್ಲಿ ಸರ್ವಾಲಂಕೃತವಾದ ಆನೆಯಮೇಲೆ ಕುಳಿತುಕೊಂಡಿದ್ದರೂ ಸಾಮಾನ್ಯವಸ್ತ್ರಧರಿಸಿ ತಮ್ಮ ಸಮ್ಮುಖದಲ್ಲಿ ಗುರುಗಳ ಗ್ರಂಥವನ್ನಿಟ್ಟುಕೊಂಡಿರುತ್ತಾರೆ. ಈ ಎಲ್ಲ ವೈಭವಗಳು ವೇದವ್ಯಾಸರಿಗೆ ಸಮರ್ಪಿತ ಎಂಬುದೇ ಅದರ ಭಾವವಾಗಿರುತ್ತದೆ, ಈ ಯತಿಗಳು ತಲೆಗೆ ಕಿರೀಟವನ್ನಾಗಲಿ ಮುಂಡಾಸವನ್ನಾಗಲೀ ಧಾರಣಮಾಡುವದಿಲ್ಲ, ತಮ್ಮ ಕಾವಿವಸ್ತ್ರವನ್ನೇ ಸುತ್ತಿಕೊಳ್ಳುವುದುಂಟು. ಇವರು ತಮ್ಮ ದೇವರ ಪೆಟ್ಟಿಗೆಯನ್ನು ಹೆಗಲ ಮೇಲಿಟ್ಟುಕೊಂಡೇ ಸಂಚರಿಸುತ್ತಾರೆ"

ಈ ವಿಚಾರಗಳನ್ನು ಕೇಳಿದ ಬಾಜೀರಾಯ ತನ್ನ ಆಹ್ನೀಕವನ್ನು ಬೇಗನೇ ಮುಗಿಸಿಕೊಂಡು ಮೇಲೆ ಬಂದು ದೂರದಿಂದ ಆಗಮಿಸುತ್ತಿದ್ದ ಶ್ರೀಗಳವರ ಪಾದಸ್ಪರ್ಶ ಮಾಡಿದ, ಹಾಗೂ ಪೂಜ್ಯರಾದ ತಾವು ನಮ್ಮ ರಾಜವಾಡೆಗೆ ಆಗಮಿಸಬೇಕೆಂದು ಆಗ್ರಹಪೂರ್ವಕ ಅವರನ್ನು ತಾನೇ ಮುಂದಾಗಿ ಕರೆದುಕೊಂಡುಹೋದ.ಅಂದಿನ ಶ್ರೀರಾಮನ ಪೂಜೆ ರಾಜವಾಡೆಯಲ್ಲಾಯಿತು. ಒಂದು ವಾರದವರೆಗೆ ಅವರನ್ನು ತನ್ನ ರಾಜಗೃಹದಲ್ಲಿಯೆ ಇರಿಸಿಕೊಂಡಿದ್ದ. ಕಡೆಯದಿನ ಬಾಜೀರಾಯನು ಬೆಳ್ಳಿಯ ತಟ್ಟೆಯಲ್ಲಿ ಮೂವತ್ತು ಸಾವಿರ ರೂಪಾಯಿಗಳನ್ನು ತಂದು ರಾಮದೇವರಿಗರ್ಪಿಸಿದ. ಮಧ್ಯಭಾಗದಲ್ಲಿ ರತ್ನದ ಪದಕವಿದ್ದ ಮುತ್ತಿನ ಕಂಠಾಭರಣವನ್ನೂ ವೈಜಯಂತೀಮಾಲೆಯನ್ನು ಹಾಗೂ ಬೆಳ್ಳಿ ಬಂಗಾರದ ಆಭರಣಗಳಿಂದ ಅಂಕೃತವಾಗಿದ್ದ ಎರಡು ಆನೆಗಳನ್ನೂ ಶ್ರೀಗಳವರಿಗೆ ಅರ್ಪಿಸಿದ,ನಂತರ ಶ್ರೀಗಳವರು ಬಾಜೀರಾಯನಿಂದ ನಿರೂಪ ಪಡೆದುಕೊಂಡು ಜಗನ್ನಾಥಪುರಿಯತ್ತ ಪ್ರಯಾಣ ಹೊರಟರು.

1818 ರಲ್ಲಿ ಪೇಶ್ವೆ ಪದವಿಯನ್ನು ಕಳೆದುಕೊಂಡಿದ್ದರೂ ಸಹ ಶ್ರೀಮಠಕ್ಕೂ ಹಾಗೂ ಪುಣೆಗೂ ಸಂಬಂಧವು ಒಂದಿಲ್ಲೊಂದು ರೀತಿಯಿಂದ ನಡೆಯುತ್ತಾ ಬಂದಿದೆ. ಬಾಜೀರಾಯನು ಕಾಲವಾದರೂ ಸಹ ಆತನಿತ್ತ ದಾನಧರ್ಮಾದಿಗಳ ಆಭರಣವನ್ನು ಇಂದಿಗೂ ಶ್ರೀಮಠದಲ್ಲಿ ನಾವು ಕಾಣಬಹುದಾಗಿದೆ.

(ನಿವೃತ್ತ ಐ ಎ.ಎಸ್. ಅಧಿಕಾರಿಗಳಾಗಿರುವ ಶ್ರೀ ಸೇತುಮಾಧವರಾವ್ ಪಗಡಿ ಇವರು ಬರೆದ ಲೇಖನದಿಂದ ಆರಿಸಲಾಗಿದೆ.)



## ವಾರ್ತಾಲಹರಿ

# ಕರ್ನಾಟಕದಲ್ಲಿ ದಾಸಸಾಹಿತ್ಯ ಕಾರ್ಯಕ್ರಮಗಳು

### ಚೀಕಲಪರವಿ :

ಚೀಕಲಪರವಿಯಲ್ಲಿ ಶ್ರೀ ವಿಜಯದಾಸರ ಆರಾಧನೆಯನ್ನು ಅಕ್ಟೋಬರ್ 30, 31 ಹಾಗೂ ನವಂಬರ್ 1 ರಂದು ಘನವಾಗಿ ಆಚರಿಸಲಾಯಿತು. ದಾಸಸಾಹಿತ್ಯ ಪ್ರಾಜೆಕ್ಟ್ ವತಿಯಿಂದ ಶ್ರೀ ಸತ್ಯನಾರಾಯಣಾಚಾರ್ಯರ ಉಪನ್ಯಾಸವೂ, ಶ್ರೀ ಶ್ರೀನಿವಾಸದಾಸ, ಶ್ರೀ ಸದಾನಂದಶಾಸ್ತ್ರಿ ಅವರುಗಳ ಹರಿಕಥೆಗಳೂ ಏರ್ಪಾಡಾಗಿದ್ದವು.

### ಗುಲ್ಬರ್ಗ :

ಗುಲ್ಬರ್ಗದ ಹಮುಮಾನ ಸೇವಾಸಂಘ ಹಾಗೂ ದಾಸಸಾಹಿತ್ಯ ಪ್ರಾಜೆಕ್ಟ್‌ಗಳ ಸಂಯುಕ್ತ ಆಶ್ರಯದಲ್ಲಿ ಸ್ಥಳೀಯ ಹೊಸ ಬಾಲಕಿಯರ ಶಾಲೆಯಲ್ಲಿ ದಿನಾಂಕ 5-11-87 ರಿಂದ 9-11-87 ರವರೆಗೆ ಐದು ದಿನಗಳ ಕಾಲ ಕರ್ನಾಟಕ ಹರಿದಾಸೋತ್ಸವ ಘನವಾಗಿ ನಡೆಯಿತು.

ದಿನಾಂಕ 5 ರಂದು ಅದಮಾರು ಮಠದ ಶ್ರೀ ಶ್ರೀ ವಿಭುದೇಶತೀರ್ಥರು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಆಶೀರ್ವಾದ ಪೂರ್ವಕವಾಗಿ ಉದ್ಘಾಟಿಸಿದರು. 5, 6, 7 ರಂದು ಶ್ರೀ ಪುಷ್ಕರ ಪ್ರಸಾದ, ಶ್ರೀ ಪ್ರಭಂಜನ ಅವರುಗಳ ಉಪನ್ಯಾಸಗಳೂ, 8 ರಂದು ಸಂಜೆ, ಶ್ರೀ ಹವಾಲ್ದಾರ ನಾಗರಾಜ ರಾವ್, ಶ್ರೀ ಶ್ರೀಪತಿ ಪಡಿಗಾರ ಅವರಿಂದಲೂ ಸಂಗೀತಕಛೇರಿಗಳು ನಡೆದವು. 9 ರಂದು ಸಂಜೆ ಶ್ರೀಮತಿ ಸರಿತಾ ಕುಸುಮಾಕರ ದೇಸಾಯಿ ಅವರನ್ನೂ ದಾಸಸಾಹಿತ್ಯ ಪ್ರಾಜೆಕ್ಟಿನ ಸಲಹಾ ಸಮಿತಿಯ ಸದಸ್ಯ ಶ್ರೀ ವಸಂತ ಕುಷ್ಟಗಿ ಅವರನ್ನೂ ಸನ್ಮಾನಿಸಲಾಯಿತು.

ಅಷ್ಟೂ ದಿನವೂ ದಾಸಸಾಹಿತ್ಯ ಪ್ರಾಜೆಕ್ಟಿನ ವಸ್ತು ಪ್ರದರ್ಶನ ಅಸಂಖ್ಯ ಜನರನ್ನು ಆಕರ್ಷಿಸಿತು.

### ಹರಪನಹಳ್ಳಿ :

ನವಂಬರ್ 12 ರಿಂದ 15 ರವರೆಗೆ ಹರಪನಹಳ್ಳಿಯ ಜ್ಞಾನ ಪಯಸ್ವಿನೀ ಹಾಗೂ ದಾಸಸಾಹಿತ್ಯ ಪ್ರಾಜೆಕ್ಟಿನ ಸಂಯುಕ್ತ ಆಶ್ರಯದಲ್ಲಿ ಹರಿದಾಸ ಉತ್ಸವ ಯಶಸ್ವಿಯಾಗಿ ನಡೆಯಿತು.

ದಿನಾಂಕ 12 ರಂದು ಶ್ರೀನಿವಾಸನ ಪ್ರತಿಕೃತಿಯ ಮೆರವಣಿಗೆಯೊಂದಿಗೆ ಆರಂಭವಾದ ಉತ್ಸವ ಕಾರ್ಯಕ್ರಮದಲ್ಲಿ 13 ರಂದ ವಿಧಾನ ಸಭಾಸದಸ್ಯ ಶ್ರೀ ಬಿ. ಎಚ್. ಎಂಕಾನಾಯಕ ಅವರು ವಸ್ತುಪ್ರದರ್ಶನವನ್ನು ಉದ್ಘಾಟಿಸಿದರು. ಶ್ರೀ ಕೆ. ಸೇತೂರಾವಾಚಾರ್ಯರ ಅಧ್ಯಕ್ಷತೆಯಲ್ಲಿ ಶ್ರೀ ಪುಷ್ಕರ ಪ್ರಸಾದದಿಂದ ಉಪನ್ಯಾಸವೂ (ದಾಸಸಾಹಿತ್ಯ ವೈಶಿಷ್ಟ್ಯ) ಶ್ರೀ ಕೃಷ್ಣದಾಸರಿಂದ ಭಜನೆಯೂ ಶ್ರೀ ಶ್ರೀನಿವಾಸ ದಾಸರಿಂದ ಹರಿಕಥೆಯೂ ನಡೆದವು.

14 ರಂದು ಹರಪನಹಳ್ಳಿ ಭೀಮವ್ವನವರ ಸಾಹಿತ್ಯದ ಬಗ್ಗೆ ಶ್ರೀ ಕೆ. ಅಪ್ಪಣ್ಣಾಚಾರ್ಯ (ವಿಶೇಷಾಧಿಕಾರಿ, ದಾಸಸಾಹಿತ್ಯ ಪ್ರಾಜೆಕ್ಟ್)ರು ಮಾತನಾಡಿದರು. ಮಾರುತಿ ಭಜನ ಮಂಡಳಿಯವರಿಂದ ಭಜನೆಯು ನಂತರ ಕುಮಾರಿ ಎಸ್. ರಮಾ ಅವರ ಸಂಗೀತ ರಂಜಿಸಿತು.

15 ರಂದು ಶ್ರೀ ಪಿ. ಎಂ. ಗಲಗಲಿಯವರು ಮರ್ಯಾದಾಪುರುಷ ಶ್ರೀರಾಮ – ಎಂಬ ಉಪನ್ಯಾಸವನ್ನು ಮಾಡಿದರು. ಶ್ರೀ ಸದಾನಂದ ಶಾಸ್ತ್ರಿ ಅವರ ಹರಿಕಥೆ, ಶ್ರೀ ಶ್ರೀಪತಿ ಪಡಿಗಾರ್ ಅವರ ಸಂಗೀತ ಕಾರ್ಯಕ್ರಮಗಳಿದ್ದವು. ನಂತರ ಹರಪನಹಳ್ಳಿ ಭೀಮವ್ವನವರ ಕೃತಿಗಳ ಹಸ್ತಪ್ರತಿಯ ಜೆರಾಕ್ಸ್ ಪ್ರತಿಗಳನ್ನು ದಾಸಸಾಹಿತ್ಯ ಪ್ರಾಜೆಕ್ಟಿಗೆ ಕೊಡುಗೆಯಾಗಿ ನೀಡಿದ ಭೀಮವ್ವನವರ ಮರಿಮಗ ಶ್ರೀ ಕೆ. ವೆಂಕಟರಾವ್ ಹಾಗೂ ಶ್ರೀ ಎಂ. ರಾಘವೇಂದ್ರರಾವ್ ಅವರುಗಳನ್ನು ಸನ್ಮಾನಿಸಲಾಯಿತು.



ಉಪನ್ಯಾಸ ಮಾಡುತ್ತ ಶ್ರೀ ಪಿ.ಎಂ. ಗಲಗಲಿ.

ಮೂರೂ ಕಡೆಗಳಲ್ಲಿ ತಿ. ತಿ. ದೇ. ಗಳ ಕನ್ನಡ ಪುಸ್ತಕಗಳ ಮಾರಾಟ ಪ್ರದರ್ಶನಗಳು ಏರ್ಪಾಡಾಗಿದ್ದು ಯಶಸ್ವಿಯಾದವು.



ಹರಪನಹಳ್ಳಿ ಭೀಮವ್ವನವರ ವಂಶಸ್ಥರನ್ನು ಸನ್ಮಾನಿಸುತ್ತ ಮಧ್ಯದಲ್ಲಿ ಶ್ರೀ ಕೆ. ಅಪ್ಪಣ್ಣಾಚಾರ್ಯ.

## ತಿ. ತಿ. ದೇ. ಧರ್ಮಕರ್ತರ ಮಂಡಳಿಯ ತೀರ್ಮಾನಗಳು

### ೨೪-೧೦-೮೭

* ತಿರುಮಲೆಯಲ್ಲಿ ಕಂಚಿ ಕಾಮಕೋಟಿ ಪೀಠದವರ ಸತ್ರನಿರ್ಮಾಣಕ್ಕಾಗಿ ನೀಡಿದ ಪ್ಲಾಟ್ ನಂ 4 ರ ಪಕ್ಕದ 40×90 ಅಡಿ ಸ್ಥಳವನ್ನೂ ಸಹ ಅವರ ಅಭ್ಯರ್ಥನೆಯ ಮೇರೆಗೆ ವರ್ಷಕ್ಕೆ 100 ರೂಗಳಂತೆ ಲೀಸ್‌ಗೆ ನೀಡಲು ತೀರ್ಮಾನಿಸಲಾಯಿತು.

* 6-4-87 ರಂದು ಅಂದಿನ ರಾಷ್ಟ್ರಪತಿ ಶ್ರೀ ಜ್ಞಾನಿ ಜೈಲ್‌ಸಿಂಗ್ ಅವರು ತಿರುಪತಿಯನ್ನು ಸಂದರ್ಶಿಸಿದಾಗ ತಿರುಪತಿಯ ಫೈನ್ ಆರ್ಟ್ಸ್ ಅಕಾದಮಿ ಯ ಕಾರ್ಯಕ್ರಮದಲ್ಲಿ ಅವರ ಹಿಂದಿ ಭಾಷಣವನ್ನು ಆಗಿಂದಾಗ್ಗೆ ಯಥಾವತ್ತಾಗಿ ತೆಲುಗಿಗೆ ಅನುವದಿಸಿ ನೀಡಿ ಎಲ್ಲರ ಮನ್ನಣೆಯನ್ನೂ ಪಡೆದ ತಿ. ತಿ. ದೇ. ಧರ್ಮಪ್ರಚಾರ ಪರಿಷತ್‌ನ ಶ್ರೀ ಎಂ.ವಿ.ಎಸ್. ಶಾಸ್ತ್ರಿ ಅವರಿಗೆ ರೂ. 500/- ಪಾರಿತೋಷಿಕವನ್ನು ನೀಡಲು ತೀರ್ಮಾನಿಸಲಾಯಿತು.

* ತಿರುಮಲೆಯ ಶ್ರೀ ವೆಂಕಟೇಶ್ವರ ಸ್ವಾಮಿ ದೇವಾಲಯದ ಮುಕುರ ಮಂಟಪದಲ್ಲಿ ಭಕ್ತರು ನಡೆಸುವ ಸ್ವಾಮಿಯ ಡೋಲೋತ್ಸವದ ಶುಲ್ಕವನ್ನು ರೂ. 1500/- ರಿಂದ ರೂ. 750/-ಕ್ಕೆ ತಗ್ಗಿಸುತ್ತ, ಈ ಆರ್ಜಿತ ಸೇವೆಯಲ್ಲಿ ಭಾಗ ವಹಿಸುವ ಗೃಹಸ್ಥರಿಗೆ ಒಂದು ಶೇಷವಸ್ತ್ರ, ಒಂದು ಉತ್ತರೀಯ, ಒಂದು ಕುಪ್ಪಸದ ಕಣವನ್ನು ಬಹುಮಾನವಾಗಿ ನೀಡಬೇಕೆಂದು ತೀರ್ಮಾನಿಸಲಾಯಿತು.

* ತಿರುಮಲೆಯ ನಿವಾಸಿಗಳನ್ನು ತಿರುಪತಿಯ ಇತರ ಕಡೆಗಳಿಗೆ ಸ್ಥಳಾಂತರಗೊಳಿಸಿ, ತಿರುಮಲೆಯ ಹೆಚ್ಚಿನ ಪರಿಸರವನ್ನು ಯಾತ್ರಿಕರ ಉಪಯೋಗಕ್ಕೆ ತರಲು 1985 ರಿಂದ ಅಹರ್ನಿಶಿ ಕೆಲಸ ಮಾಡಿದ ತಿರುಮಲೆ ಪಂಚಾಯಿತಿಯ ಕೆಳಕಾಣಿಸಿದ ಉದ್ಯೋಗಿಗಳಿಗೆ ರೂ. 200/- ಪಾರಿತೋಷಿಕವನ್ನು ನೀಡಲು ತೀರ್ಮಾನಿಸಲಾಯಿತು :- ಸರ್ವಶ್ರೀ ಪಿ. ರಾಧಾಕೃಷ್ಣರಾವು, ಸಿ. ಮುನಸ್ವಾಮಿ, (ಸೂಪರಿಂಟೆಂಡೆಂಟ್‌ಗಳು) ವಿ. ಚಂದ್ರಶೇಖರ ಶರ್ಮ (ರೆವಿನ್ಯೂ ಇನ್ಸ್‌ಪೆಕ್ಟರ್) ಬಿ. ರಂಗನಾಥುಡು (ಮೇಲ್ದರ್ಜೆ ಗುಮಾಸ್ತೆ) ಸಿ. ಜಾನಕೀರಾಂ, ಇ. ನರಸಿಂಹಾರೆಡ್ಡಿ, ಸಿ. ಗೋಪಾಲರಾವ್, ಎಂ. ಸುಬ್ಬರಾಯುಲು ಶೆಟ್ಟಿ (ಕೆಳದರ್ಜೆ ಗುಮಾಸ್ತರು) ಸಿ. ಶೇಖರ್ (ಸರ್ವೇಯರ್) ಜಿ. ಬತ್ತಯ್ಯ, ಕೆ. ಸಂಜೀವಿ, ಎಂ. ನಾಗಯ್ಯ, (ಜೈನ್‌ಮನ್‌ಗಳು) ಎ. ಎಸ್. ರವಿಶಂಕರ್ (ಎಸ್. ಎಂ. ಆರ್. ಅಟೆಂಡರ್)

* ಕೀ. ಶೇ. ಶ್ರೀ ಎಸ್. ಕೆ. ಸೋಮಾನಿ ಹಾಗೂ ಅವರ ಪಾಲುದಾರರು ಸೇರಿದ ಶ್ರೀ ಎಸ್. ಕೆ. ಸೋಮಾನಿ ಮೆಮೋರಿಯಲ್ ಟ್ರಸ್ಟ್‌ನ ಹೆಸರಿನಲ್ಲಿ ನಾರಾಯಣಗಿರಿ ಮೂರನೇ ಸತ್ರ ನಿರ್ಮಾಣಕ್ಕೆ ನೀಡಿದ ವಂತಿಗೆಯನ್ನು ಅಂಗೀಕರಿಸುತ್ತ, ಸದರಿ ಸತ್ರಕ್ಕೆ ಶ್ರೀಕೃಷ್ಣನಿಲಯಂ ಎಂದು ಹೆಸರಿಡಲು ತೀರ್ಮಾನಿಸಲಾಯಿತು.

* ಚಿತ್ತೂರು ಜಿಲ್ಲೆಯ ಪುತ್ತೂರಿನಲ್ಲಿ 15 ಲಕ್ಷ ರೂಗಳ ವೆಚ್ಚದಲ್ಲಿ ತಿ.ತಿ.ದೇ. ಕಲ್ಯಾಣಮಂಟಪ ನಿರ್ಮಾಣ ಮಾಡಲು ತೀರ್ಮಾನಿಸಲಾಯಿತು.



## ವೈಭವದ ಪುಷ್ಪಯಾಗ

ಶ್ರೀ ವೆಂಕಟೇಶ್ವರಸ್ವಾಮಿ ಆಲಯದಲ್ಲಿ ಅಕ್ಟೋಬರ್ 30ರ ಶುಕ್ರವಾರದಂದು ಬೆಳಗ್ಗೆ 7 ಗಂಟೆಯಿಂದ ಸಂಜೆ 6 ಗಂಟೆಯವರೆಗೆ ಪುಷ್ಪಯಾಗ ವೈಭವದಿಂದ ನಡೆಯಿತು. ಈ ಬಾರಿ 40 ಮಂದಿ ಗೃಹಸ್ಥರು ತಮ್ಮ ಕುಟುಂಬಗಳೊಂದಿಗೆ ಒಬ್ಬೊಬ್ಬರೂ 3500 ರೂಗಳ ಶುಲ್ಕ ಸಲ್ಲಿಸಿ ಈ ಯಾಗದಲ್ಲಿ ಪಾಲುಗೊಂಡರು. (ಕಳೆದ ವರ್ಷ 37 ಮಂದಿ ಈ ಸೇವೆಯಲ್ಲಿ ಪಾಲ್ಗೊಂಡಿದ್ದರು ಎಂಬುದನ್ನು ಇಲ್ಲಿ ನೆನೆಯಬಹುದು.) ಈ ನಲವತ್ತು ಮಂದಿ ಗೃಹಸ್ಥರಿಗೂ ತಲಾ 5 ಗ್ರಾಂಗಳ ಬಂಗಾರದ ಪದಕ, ಒಂದು ಅಂಗವಸ್ತ್ರ, ಒಂದು ಕುಪ್ಪಸದ ಕಣ, ಒಂದು ಲಾಡು, ಒಂದು ವಡೆ ಬಹುಮಾನವಾಗಿ ನೀಡಲಾಯಿತು.

## ತಿರುಮಲೆಯಲ್ಲಿ ವರುಣ ಜಪ

ತಿರುಮಲೆಯಲ್ಲಿ ನವಂಬರ್ 1 ರಿಂದ 5 ರವರೆಗೆ ಸ್ವಾಮಿಪುಷ್ಕರಿಣಿಯಲ್ಲಿ ವರುಣ ಜಪ ನಡೆಯಿತು.

ವರ್ಷದೇವತೆಯನ್ನು ಪ್ರಸನ್ನಗೊಳಿಸುವ ಈ ಜಪವನ್ನು ಸ್ವಾಮಿಪುಷ್ಕರಿಣಿಯಲ್ಲಿ ವೇದಪಂಡಿತರು ಶಾಸ್ತ್ರೀಯವಾಗಿ ನಿರ್ವಹಿಸಿದರು.

## ತಿರುಮಲೆಯಲ್ಲಿ ಭಾರತ ನೌಕಾಧಿಪತಿ

ಭಾರತದ ಮಾಜಿ ನೌಕಾದಳಾಧಿಪತಿ ಶ್ರೀ ಆರ್. ಎಚ್. ತಹಲಿಯಾನಿ ಅವರು ತಮ್ಮ ಪದವಿ ವಿರಮಣಕ್ಕೆ ಮೊದಲು 1987 ನೇ ನವಂಬರ್ 18 ರಂದು ತಿರುಮಲೆಗೆ ತಮ್ಮ ಕುಟುಂಬ ಸಹಿತರಾಗಿ ಆಗಮಿಸಿ ಸ್ವಾಮಿಯನ್ನು ಸೇವಿಸಿದರು.

1987 ನೇ ನವಂಬರ್ 30 ರಂದು ಪದವಿಯಿಂದ ನಿವೃತ್ತರಾಗುವ ತಾವು ದೈವದರ್ಶನಕ್ಕಾಗಿಯೇ ತಿರುಪತಿಗೆ ಬಂದದ್ದೆಂದೂ, ಸ್ವಾಮಿ ದರ್ಶನದಿಂದ ತಮಗೆ ಅತ್ಯಂತ ಆನಂದವಾಗಿದೆಯೆಂದೂ ಅವರು ತಿಳಿಸಿದರು. ಅವರನ್ನು ತಿ. ತಿ. ದೇ.ಗಳ ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶಕುಮಾರ್ ಅವರು ಸ್ವಾಗತಿಸಿದರು.

# ಕರ್ನಾಟಕದಲ್ಲಿ

## ಕರಿಗಿರಿಯಲ್ಲಿ ಕಾರ್ತೀಕ ಲಕ್ಷ ದೀಪೋತ್ಸವಾರಂಭ

ತುಮಕೂರು ಜಿಲ್ಲೆಯ ದೇವರಾಯನ ದುರ್ಗದ ಕರಿಗಿರಿ ಲಕ್ಷ್ಮೀನರಸಿಂಹ ದೇವಾಲಯದಲ್ಲಿ ಪ್ರಭವ ನಾಮ ಸಂವತ್ಸರದ ಕಾರ್ತೀಕ ಬಹುಳ ಚೌತಿ ಸೋಮವಾರದಂದು (9–11–87) ದ್ವಾರಕಾ ಬದರಿ ಆಶ್ರಮದ ಪೀಠಾಧಿಪತಿ ಶ್ರೀ ಶ್ರೀ ವಿದ್ಯಾನಾರಾಯಣ ತೀರ್ಥರು ಜ್ಯೋತಿ ಬೆಳಗುವುದರ ಮೂಲಕ ಕಾರ್ತೀಕ ಲಕ್ಷ ದೀಪೋತ್ಸವವನ್ನು ಆರಂಭಿಸಿದರು.

ತಹಶೀಲ್ದಾರ್ ಹಾಗೂ ಮುಜರಾಯಿ ಅಧಿಕಾರಿಗಳಾದ ಶ್ರೀ ಆರ್ ಜಗದೀಶ ಅವರ ನೇತೃತ್ವದಲ್ಲಿ ಅಂದು ಬೆಳಗ್ಗೆ ಶ್ರೀಪಾದಂಗಳವರಿಗೆ ಸನ್ಮಾನ ಪತ್ರವನ್ನು ಸಮರ್ಪಿಸಿ ಲಕ್ಷ ದೀಪೋತ್ಸವ ಸ್ಮರಣ ಸಂಚಿಕೆ 'ದೀಪಿಕಾ' ವನ್ನು ಬಿಡುಗಡೆ ಮಾಡಲಾಯಿತು.

ಮೈಸೂರು ಅರಸರಾದ ಶ್ರೀಕೃಷ್ಣರಾಜ ಒಡೆಯರ್ ಧರ್ಮಪತ್ನಿ ಕೃಷ್ಣಮ್ಮಾಂಬಾ ಅವರು ಕ್ರಿ. ಶ. 1858 ರಲ್ಲಿ ಜೀರ್ಣೋದ್ಧಾರ ಮಾಡಿಸಿದ ಮೇಲೆ, ಈಗ ಮತ್ತೆ ಕರ್ನಾಟಕ ಸರ್ಕಾರದ ವತಿಯಿಂದ ಜೀರ್ಣೋದ್ಧಾರ ಹೊಂದುತ್ತಿರುವ ದೇವಾಲಯದಲ್ಲಿ ಲಕ್ಷ ದೀಪೋತ್ಸವವನ್ನು ಆರಂಭಿಸಲು ಶ್ರೀ ಬಿ. ಎಸ್. ವೇಣುಗೋಪಾಲನ್ ಹಾಗೂ ಅವರ ಕುಟುಂಬ, ಮಿತ್ರ ವರ್ಗದ ಉತ್ಸಾಹ, ಭಕ್ತಿಗಳೇ ಕಾರಣವೆನ್ನಬೇಕು.

## ಶ್ರೀ ಶ್ರೀ ಸತ್ಯವೀರ ತೀರ್ಥರ ಶತಮಾನೋತ್ಸವ

1987 ಅಕ್ಟೋಬರ್ 30, 31, ಹಾಗೂ ನವಂಬರ್ 1 ರಂದು ಮುಂಡರಗಿ ತಾಲ್ಲೂಕಿನ ಕೋರ್ಲಹಳ್ಳಿಯಲ್ಲಿ ಶ್ರೀ ಶ್ರೀ ಸತ್ಯವೀರ ತೀರ್ಥರ ಆರಾಧನಾ ಶತಮಾನೋತ್ಸವ ಶ್ರೀಶ್ರೀ ಸತ್ಯಪ್ರಮೋದ ತೀರ್ಥ ಶ್ರೀಪಾದಂಗಳ ಅಧ್ಯಕ್ಷತೆಯಲ್ಲಿ ಶ್ರೀ ಕೂಡಲಿ ಆರ್ಯ ಅಕ್ಷೋಭ್ಯತೀರ್ಥರ ಉಪಸ್ಥಿತಿಯಲ್ಲಿ ಯಶಸ್ವಿಯಾಗಿ ನಡೆಯಿತು.

ಶ್ರೀ ಜಯತೀರ್ಥಾಚಾರ್ಯ ಮಳಗಿಯವರು (ಉತ್ತರಾದಿ ಮಠದ ಪರಂಪರೆ) ಶ್ರೀ ಕೇಶವಾಚಾರ್ಯ ಜಾಲಿಹಾಳ (ಶ್ರೀ ಶ್ರೀ ಸತ್ಯಪ್ರಮೋದ ತೀರ್ಥರ ಆಸ್ಥಾನ) ಉಪನ್ಯಾಸಗಳನ್ನು ನೀಡಿದರು. ಸರ್ವಶ್ರೀ ಮಾಧವಾಚಾರ್ಯ ಕಟ್ಟಿ, ಕೃಷ್ಣಮೂರ್ತಿ ಕಷ್ಟಗಿ ಶುಕಾಚಾರ್ಯ ಗಲಗಲಿ, ರಾಘವೇಂದ್ರರಾವ್, ವಿಜಯೀಂದ್ರ ಶರ್ಮಾ ಅವರುಗಳು ವಿವಿಧ ವಿಷಯಗಳ ಬಗ್ಗೆ ಮಾತನಾಡಿದರು.

ಎರಡನೆಯದಿನ ಬೆಳಗ್ಗೆ ಅಭಿವೃದ್ಧಿ ಸಭೆ ಸುಧಾ ಅನುವಾದದೊಡನೆ ಪ್ರಾರಂಭವಾಯಿತು. ಸಾಯಂಕಾಲ ವೈಭವದ ಮೆರವಣಿಗೆ, ಶ್ರೀಗಳವರ ತುಲಾಭಾರ, ಮಾನಪತ್ರ ಸಮರ್ಪಣೆಗಳ ನಂತರ ಆಚಾರ್ಯರುಗಳಾದ ಕಾಲಗಿ, ಮಳಗಿ, ಗಲಗಲಿ, ಜಾಲಿಹಾಳ, ಕಟ್ಟಿ, ಸೂಳಿಭಾವಿ ಮೊದಲಾದವರ ಉಪನ್ಯಾಸಗಳು ನಡೆದವು. ಶ್ರೀಪಾದಂಗಳು ಅನುಗ್ರಹ ಭಾಷಣಮಾಡಿ ಪಂಡಿತರುಗಳಾದ ಯದುಪತ್ಯಾಚಾರ್ಯ ಬೀದರಹಳ್ಳಿ, ಪ್ರಹ್ಲಾದಚಾರ್ಯ ಉಪಾಧ್ಯ ಅವರಿಗೆ ಧನದ ರೂಪದ ಸಂಭಾವನೆ ನೀಡಿದರು. ಮಠಕ್ಕೆ ಅಪೂರ್ವ ಸೇವೆ ಸಲ್ಲಿಸುತ್ತಿರುವ ಶ್ರೀ ಕೆ. ವಿ. ಬೀದರ ಹಳ್ಳಿಯವರನ್ನು ಶಾಲು ಹೊದಿಸುವುದರ ಮೂಲಕ ಸನ್ಮಾನಿಸಿದರು.

ಶತಮಾನೋತ್ಸವ ಸಮಿತಿಯ ಅಧ್ಯಕ್ಷ ಡಾ॥ ಪ್ರಹ್ಲಾದ ಶ್ರೀನಿವಾಸರಾವ್ ಹುಯಿಲಗೋಳರನ್ನೂ ಸನ್ಮಾನಿಸಲಾಯಿತು.

ತತ್ಸಂದರ್ಭದಲ್ಲಿ 'ಗುರುಸ್ಮರಣೆ'–ಸ್ಮರಣ ಸಂಚಿಕೆಯನ್ನು ಶ್ರೀ ಕೂಡಲಿ ಅಕ್ಷೋಭ್ಯ ಮಠದ ಶ್ರೀಪಾದಂಗಳು ಬಿಡುಗಡೆ ಮಾಡಿದರು. ★

## ಡಾ॥ ಜಿ. ವರದರಾಜ ರಾವ್ ಅವರ ನಿಧನ

ಕನ್ನಡ ಹೆಸರಾಂತ ಸಾಹಿತಿ, ಕವಿ, ಸಂಶೋಧಕ–ಡಾ॥ ಜಿ ವರದರಾಜ ರಾಯರು ಇದೇ ನವಂಬರ್ 13 ರಂದು ಬೆಂಗಳೂರು ನಗರದಲ್ಲಿ ನಿಧನ ಹೊಂದಿದರೆಂದು ತಿಳಿಸಲು ಸಪ್ತಗಿರಿ ವಿಷಾದಿಸುತ್ತದೆ.

ದಿವಂಗತರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಪ್ರಾಚಾರ್ಯರಾಗಿ ಮಂಗಳೂರಿನ ಮಂಗಳಗಂಗೋತ್ರಿಯ ನಿರ್ದೇಶಕರಾಗಿ ನಾಡು ನುಡಿಯ ಸೇವೆ ಮಾಡಿದ್ದರು. ಹರಿದಾಸ ಸಾಹಿತ್ಯಕ್ಷೇತ್ರದಲ್ಲಿ ಅಪಾರ ಸಂಶೋಧನೆ, ಮಾಡಿದ್ದ ಶ್ರೀಯುತರ ಶ್ರೀಪಾದರಾಜರ ಕೃತಿಗಳು, ಮಹಿಪತಿದಾಸರ ಕೃತಿಗಳು ಈಗಾಗಲೇ ಪ್ರಕಟವಾಗಿವೆ. ಹರಿದಾಸ ಹೃದಯ ಮೊದಲಾದ ಹಲವಾರು ಪುಸ್ತಕಗಳನ್ನೂ ಕವನ ಸಂಕಲನಗಳನ್ನೂ ಪ್ರಕಟಿಸಿದ ಅವರ ದಾಸಸಾಹಿತ್ಯಸಾರ ಸಧ್ಯದಲ್ಲೇ ಮೈಸೂರು ವಿಶ್ವವಿದ್ಯಾಲಯದ ಮೂಲಕ ಪ್ರಕಟವಾಗಲಿದೆ. ಮೈಸೂರು ವಿ.ವಿ.ಯ ಕನ್ನಡ ಅಧ್ಯಯನ ಸಂಸ್ಥೆಯ ಹರಿದಾಸ ಸಾಹಿತ್ಯ ವಿಭಾಗದ ಮುಖ್ಯಸ್ಥರಾಗಿ ಕೆಲಸ ಮಾಡಿದ ಅವರು ಹರಿದಾಸ ಸಾಹಿತ್ಯದ ಬಗ್ಗೆ ಅಧಿಕಾರ ವಾಣಿಯಿಂದ ಮಾತನಾಡಬಲ್ಲವರಾಗಿದ್ದರು. ಅವರ ನಿಧನದಿಂದಾಗಿ ಹರಿದಾಸಸಾಹಿತ್ಯದ ನಗು ಮುಖದ ನಿರ್ಮಾಪಕ ಒಂದು ವಿದ್ವದ್ವಾಣಿ ಮೂಕವಾದಂತಾಗಿದೆ ಎಂದು ಹೇಳಬಹುದು.

ಶ್ರೀಯುತರಿಗೆ 70 ವರ್ಷ ವಯಸ್ಸಾಗಿದ್ದು ಪತ್ನಿ ಮತ್ತು ಮೂವರು ಪುತ್ರಿಯರನ್ನು ಬಿಟ್ಟುಹೋಗಿದ್ದಾರೆ.

ಶ್ರೀಯುತರ ಆತ್ಮಕ್ಕೆ ಶಾಂತಿಯನ್ನು ನೀಡಲೆಂದು ಶ್ರೀ ವೆಂಕಟೇಶ್ವರ ಸ್ವಾಮಿಯಲ್ಲಿ ಸಪ್ತಗಿರಿ ಪ್ರಾರ್ಥಿಸುತ್ತದೆ.

## ಮುಂದಿನ ಸಂಚಿಕೆಯಲ್ಲಿ .... .... ....

### ಸಪ್ತಗಿರಿ. — ಜನವರಿ 1988

**ಸಂಸ್ಕೃತ ಸಾಹಿತ್ಯದಲ್ಲಿ ಸಂಗೀತ**
– ಮೂರ್ತಿ ರಾಮನಾಥಪುರ

**ಅಹಲ್ಯಾಬಾಯಿ**
– ಆದ್ಯ ರಾಮಾಚಾರ್ಯ

**ಹಾಸ್ಯ**
– ಕೆ. ಕೇಶವಮೂರ್ತಿ

**ಪುರಂದರರ ಒಂದು ಪದ**
– ಶ್ರೀನಿವಾಸ ಪುಕಳ

**ಉಡುಪಿಯ ಪರ್ಯಾಯೋತ್ಸವ**
– ಶ್ರೀನಿವಾಸ ಕಂಠಿ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದದಲ್ಲೂ ಬರೆಯಬೇಕು. ಬರೆಯಿರಿ – ಸಂಪಾದಕರು
ತಿ.ತಿ.ದೇ. ತಿರುಪತಿ.

---

# ತಿಂಗಳಿನ ಮುಖ್ಯದಿನಗಳು

## ಜನವರಿ 1988

| | | |
|---|---|---|
| 1. | ಶುಕ್ರವಾರ | ಆಂಗ್ಲ ಸಂವತ್ಸರಾದಿ |
| 2. | ಶನಿವಾರ | ಕಪಿಲತೀರ್ಥದಲ್ಲಿ ತೆಪ್ಪೋತ್ಸವ ಸಮಾಪ್ತಿ |
| 8. | ಶುಕ್ರವಾರ | ಆಂಡಾಳ್ ನೀರಾಟ್ಟೋತ್ಸವ |
| 14. | ಗುರುವಾರ | ಭೋಗಿ ಹಬ್ಬ |
| 15. | ಶುಕ್ರವಾರ | ಮಕರ ಸಂಕ್ರಾಂತಿ |
| 16. | ಶನಿವಾರ | ಕನೂಹಬ್ಬ, ಶ್ರೀ ಗೋದಾ ಪರಿಣಯೋತ್ಸವ |
| 25. | ಸೋಮವಾರ | ರಥಸಪ್ತಮಿ |
| 26. | ಮಂಗಳವಾರ | ಭಾರತ ಗಣತಂತ್ರದಿನ |
| 28. | ಗುರುವಾರ | ತಿರುಪತಿ ಶ್ರೀಗೋವಿಂದ ರಾಜಸ್ವಾಮಿ ತೆಪ್ಪೋತ್ಸವಾರಂಭ |

---

# ಚಂದಾದಾರರಲ್ಲಿ ಒಂದು ಮನವಿ

ಕನ್ನಡ ಸಪ್ತಗಿರಿಯ ನೇರ ಚಂದಾದಾರರಲ್ಲಿ ಜನವರಿ 1988 ಕ್ಕೆ ಚಂದಾ ಅವಧಿ ಮುಗಿಯುವ ಚಂದಾ ಕ್ರಮಸಂಖ್ಯೆಗಳನ್ನು ಕೆಳಗೆ ನೀಡಲಾಗಿದೆ. ಚಂದಾದಾರರು ದಯವಿಟ್ಟು ತಮ್ಮ ಮುಂದಿನ ಚಂದಾ ಹಣವನ್ನು ಕೂಡಲೇ ಎಂ.ಓ. ಮಾಡಬೇಕೆಂದು ವಿನಂತಿ.

10, 11, 12, 13, 17, 19, 21, 23, 30, 31, 32, 33, 51, 52, 55, 60, 68, 74, 75, 78, 82, 98, 100, 127, 129, 130, 132, 136, 137, 141, 150, 198, 208, 212, 213, 216, 220, 291, 305, 307, 308, 309, 315, 318 ರಿಂದ 323, 325, 326, 327, 403, 404, 412, 414, 586 ರಿಂದ 589 597, 600, 604, 609, 610, 612, 613, 619, 623, 631, 635, 637, 646, 650, 651, 658, 664, 669, 673, 676, 681, 682, 686, 692, 702, 706, 716, 728, 732, 734, 743, 745, 1172 ರಿಂದ 1185, 1187 ರಿಂದ 1190, 1192 ರಿಂದ 1197, 1199, 1200, 1201, 1203 ರಿಂದ 1211, 1214 ರಿಂದ 1255, 1257 ರಿಂದ 1276, 1278 ರಿಂದ 1286, 1288, 1290, 1293 ರಿಂದ 1300.

ಚಂದಾ ಹಣವನ್ನು ಕಳುಹಿಸುವ ಚಂದಾದಾರರು ತಮ್ಮ ಚಂದಾ ಸಂಖ್ಯೆಯನ್ನು ತಪ್ಪದೆ ಸ್ಪಷ್ಟವಾಗಿ ಬರೆಯಬೇಕು. ವಿಳಾಸವನ್ನು ಬಿಡಿಯಾದ ದಪ್ಪ ಅಕ್ಷರಗಳಲ್ಲಿ ಬರೆಯಿರಿ. ವಿಳಾಸ ಬದಲಾವಣೆಯನ್ನು ತಿಳಿಸುವಾಗ ಚಂದಾ ಕ್ರಮ ಸಂಖ್ಯೆಯನ್ನೂ, ಹೊಸವಿಳಾಸವನ್ನೂ ಸ್ಪಷ್ಟವಾಗಿ ಬರೆಯ ಬೇಕೆಂದು ವಿನಂತಿಸಲಾಗಿದೆ.

**ಸಂಪಾದಕರು, ಸಪ್ತಗಿರಿ**
**ತಿ. ತಿ. ದೇ. ತಿರುಪತಿ.**

Edited and Published on behalf of the T T Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

